# ಚಿಕ್ಕ ಮಕ್ಕಳು ಬರವಣಿಗೆಯನ್ನು ಕಲಿಯುವುದು

**ರಜನೀ ದ್ವಿವೇದಿ**

**ಸಾರಾಂಶ**

ಮಕ್ಕಳು ಸಹಜವಾಗಿ ಬರೆಯುತ್ತಾರೆ, ದಿನ ನಿತ್ಯದ ಜೀವನದಲ್ಲಿ ಇದಕ್ಕೆ ಹಲವಾರು ನಿದರ್ಶನಗಳು ಕಂಡುಬರುತ್ತವೆ ಎಂಬ ಮಾತನ್ನು ಬಹಳಷ್ಟು ಸಲ ಹೇಳುವುದಿದೆ. ಇವೆಲ್ಲದರ ಹೊರತಾಗಿ ಮಕ್ಕಳಿಗೆ ಕಲಿಸಿಕೊಡುವುದು ಹೇಗೆ ಎನ್ನುವುದೇ ಚಿಂತೆ. ಈ ಕಲಿಸುವಿಕೆಯಲ್ಲಿ ಮಕ್ಕಳಿಗೆ ಬರಬೇಕು ಎಂದು ಹಿರಿಯರಿಗೆ ಅನ್ನಿಸುವ ಸಂಗತಿಗಳ ಮೇಲೆಯೇ ಹೆಚ್ಚು ಒತ್ತು ಇರುತ್ತದೆ. ಹಿರಿಯರೆಂದರೆ(ವಯಸ್ಕರು) ಅದರಲ್ಲಿ ಅವರ ಪೋಷಕರು, ಕುಟುಂಬದ ಇತರೆಯವರು, ಶಿಕ್ಷಕರು ಇವರೆಲ್ಲ ಸೇರಿರುತ್ತಾರೆ. ಉದಾಹರಣೆಗೆ ಅವಧಿ ಭಾಷೆ ಮಾತನಾಡುವ ಕುಟುಂಬದ ಬಾಲಕನಿಗೆ ಅವನ ಮನೆಯಲ್ಲಿ ಆಡಲಾಗುವ ಅವಧಿ ಭಾಷೆ ಬರುತ್ತದೆಂದಾದರೆ ಆ ಕುಟುಂಬದ ಹಿರಿಯರಿಗೆ ಅವನು ಬೇಗ ಹಿಂದಿಯನ್ನು ಕಲಿತುಬಿಡಲಿ ಎಂಬ ಆಸೆ, ಒಂದು ವೇಳೆ ಮನೆಯಲ್ಲಿ ಹಿಂದಿ ಮಾತನಾಡುತ್ತಿದ್ದಾರೆಂದಾದರೆ ತಂದೆ ತಾಯಿಗಳಿಗೆ ಅವನು ಬೇಗನೆ ಇಂಗ್ಲಿಷ್ ಕಲಿತುಬಿಡಲೆಂಬ ಆಸೆ. ಒಂದು ವೇಳೆ ಬಾಲಕನು ಗೋಡೆಯ ಮೇಲೆ, ನೆಲದ ಮೇಲೆ ಗೀಚಲು, ಚಿತ್ತಾರ ಮಾಡಲು ಶುರುಮಾಡಿದನೆಂದರೆ ಅಪ್ಪ ಅಮ್ಮ ಕೂಡಲೆ ಅವನಿಗೆ ಕಾಪಿ ಪೆನ್ ತಂದುಕೊಟ್ಟುಬಿಡುತ್ತಾರೆ, ಕ್ರೇಯಾನ್ ಮತ್ತು ಬೇರೆ ಬೇರೆ ಬಣ್ಣಗಳನ್ನು ತಂದುಕೊಟ್ಟುಬಿಡುತ್ತಾರೆ. ಹುಡುಗ ತುಂಬ ಕಲಿಯಬೇಕು ಮತ್ತು ಬೇಗ ಬೇಗ ಕಲಿಯಬೇಕು ಎಂಬುದೇ ಎಲ್ಲರ ಇಚ್ಛೆ. ಈಗ ಇದನ್ನು ಬೇಡಿಕೆ ಅಂತ ಹೇಳಬೇಕೋ ಇಲ್ಲ ಅವರ ಅಪೇಕ್ಷೆ ಅಂತ ಹೇಳಬೇಕೋ ಏನೂ ಗೊತ್ತಾಗುತ್ತಾ ಇಲ್ಲ. ಆದರೆ ಇದರಲ್ಲಿ ಮಕ್ಕಳು ಏನನ್ನು ಕಲಿಯಲಿಚ್ಛಿಸುತ್ತಾರೆ ಮತ್ತು ಹೇಗೆ ಕಲಿಯಲಿಚ್ಛಿಸುತ್ತಾರೆ, ಯಾವ ವೇಗದಲ್ಲಿ ಕಲಿಯಲಿಚ್ಛಿಸುತ್ತಾರೆ ಎಂಬುದೆಲ್ಲವೂ ಅತ್ತಕಡೆ ಇದ್ದುಬಿಡುತ್ತೆ.

ಈ ಲೇಖನ ಮಕ್ಕಳು ಬರೆಯುವುದನ್ನು ಕಲಿಯುವುದರ ಕುರಿತು ಇದೆ. ಲೇಖನದ ಮುಖ್ಯ ಆಧಾರ ಎರಡರಿಂದ ಆರೂವರೆ ವಯಸ್ಸಿನ ಮಕ್ಕಳನ್ನು ಅವಲೋಕಿಸಿದ್ದು ಮತ್ತು ಅವರೊಂದಿಗೆ ನಡೆಸಲಾದ ಅಂತಃಕ್ರಿಯೆಗಳು. ಅವರ ಬರವಣಿಗೆಯ ನಿದರ್ಶನಗಳನ್ನು ನೋಡುತ್ತ ಸಹಜ ಬರವಣಿಗೆ ಎಂದರೇನು ಹಾಗೂ ಇದರ ಬೆಳವಣಿಗೆ ಹೇಗೆ ಆಗುತ್ತದೆ ಎಂಬುದನ್ನು ತಿಳಿದುಕೊಳ್ಳಲು ಯತ್ನಿಸಲಾಗಿದೆ. ಈ ಪ್ರಕ್ರಿಯೆಯಲ್ಲಿ ಮಕ್ಕಳು ಏನೇನು ತಿಳಿವಳಿಕೆಯನ್ನು ರೂಪಿಸಿಕೊಳ್ಳುತ್ತಿದ್ದಿರಬೇಕು ಮತ್ತು ಮಕ್ಕಳು ಈ ತಿಳಿವಳಿಕೆಯನ್ನು ಹೇಗೆ ರೂಪಿಸಿಕೊಳ್ಳುತ್ತಾ ಹೋಗುತ್ತಾರೆ ಹಾಗೂ ಇದು ಅವರು ಮಾಡಿದ ಬರವಣಿಗೆಯ ಕೆಲಸದಲ್ಲಿ ಹೇಗೆ ಪ್ರತಿಬಿಂಬಿತವಾಗುತ್ತದೆ? ಬರವಣಿಗೆಯನ್ನು ಕುರಿತಂತೆ ಸಾಮಾನ್ಯವಾಗಿ ಹಿರಿಯರು ಏನು ತಿಳಿದಿದ್ದಾರೆ ಎಂಬುದರ ಜೊತೆಗೆ ಮಕ್ಕಳ ಬರವಣಿಗೆಯ ಪ್ರಕ್ರಿಯೆಯು ಬೆಳವಣಿಗೆ ಹೊಂದುವಲ್ಲಿ ಇದು ಹೇಗೆ ಬಾಧಕವಾಗಬಲ್ಲುದು ಮತ್ತು ಬಾಧಕವಾಗುತ್ತಿದೆ; ಹಾಗಾಗಿ ಇದರಲ್ಲಿ ಹಿರಿಯರ ಪಾತ್ರ ಏನಿರಬೇಕು –ಈ ಎಲ್ಲದರ ಬಗ್ಗೆಯೂ ಈ ಲೇಖನದಲ್ಲಿ ಚರ್ಚಿಸಲಾಗಿದೆ.

**ಮಕ್ಕಳ ಹಿನ್ನೆಲೆ**

ಯಾವ ಮಕ್ಕಳೊಂದಿಗೆ ಕೆಲಸ ಮಾಡಿದೆನೋ ಅ ಎಲ್ಲ ಮಕ್ಕಳೂ ಮಧ್ಯಮ ವರ್ಗದ ಪರಿವಾರದಿಂದ ಬಂದವರಾಗಿದ್ದರು. ಮಕ್ಕಳ ಪೋಷಕರು ಉಚ್ಚ ಶಿಕ್ಷಣದ ಹಂತದವರೆಗೂ ಓದು ಬರೆದು ಮಾಡಿದವರು. ಬರವಣಿಗೆಗೆ ಬೇಕಾದ ಸಾಧನಗಳು(ಉಪಕರಣಗಳು) ಮಕ್ಕಳಿಗೆ ಲಭ್ಯವಿದ್ದೇ ಇರುತ್ತವೆ.

**ಬರೆಯುವುದು ಏನನ್ನು?**

ಸರಿಸುಮಾರು ಎಲ್ಲ ಮಕ್ಕಳೂ ಎರಡು ಎರಡೂವರೆ ವಯಸ್ಸಿನವರಾಗುವ ಹೊತ್ತಿಗೆ ತಮ್ಮ ಸುತ್ತುಮುತ್ತಿನ ಜನರ ಆಡುನುಡಿಯನ್ನು ಬಳಕೆ ಮಾಡಲಾರಂಭಿಸುತ್ತಾರೆ. ವಯಸ್ಸು ಹೆಚ್ಚುತ್ತ ಹೋದಂತೆಲ್ಲ ಆಡುನುಡಿಯ ಮೇಲೆ ಅವರ ಪ್ರಭುತ್ವ ಹೆಚ್ಚಾಗುತ್ತಾ ಹೋಗುತ್ತದೆ. ಮಕ್ಕಳು ಇವನ್ನು ಹೇಗೆ ಕಲಿಯುತ್ತಾರೆ, ಹೇಗೆ ಬೇರೆ ಬೇರೆ ಧ್ವನಿಗಳು ಮತ್ತು ಅವುಗಳೊಂದಿಗೆ ಸೇರಿ ಆಗುವ ಶಬ್ದಗಳನ್ನು ಹಿಡಿಯುತ್ತಾರೆ(=ಗ್ರಹಿಸುತ್ತಾರೆ)? ಆದರೆ ಮಕ್ಕಳು ಇದೆಲ್ಲವನ್ನೂ ಮಾಡುತ್ತಾರೆ.

ಮತ್ತು ತಮ್ಮ ಯಾವುದೇ ಬಗೆಯ ವಿಷಯವನ್ನು, ಅದು ಯಾವುದಾದರೊಂದು ವಸ್ತುವಿನ ವಿವರವಾಗಿರಬಹುದು, ಪ್ರಶ್ನೆಯಾಗಿರಬಹುದು, ಇಲ್ಲವೆ ಯಾವುದಾದರೂ ಭಾವನೆಯಾಗಿರಬಹುದು, ಅಥವಾ ಯಾವುದಾದರೂ ಹಾಸ್ಯ(ತಮಾಶೆ)ವಾಗಿರಬಹುದು, ಎಲ್ಲವನ್ನೂ ಸ್ವತಂತ್ರವಾಗಿ ಅಭಿವ್ಯಕ್ತಿಸುವುದನ್ನು ಕಲಿತುಬಿಡುತ್ತಾರೆ, ಮಕ್ಕಳಿಗೆ ಕಲಿಸುವ, ಅವರನ್ನು ತಿದ್ದುವ ಎಕ್ಸರ್ ಸೈಜನ್ನು ಹಿರಿಯರು ಮಾಡುತ್ತಲೇ ಇದ್ದಾಗ್ಯೂ ತಮ್ಮ ವಿಷಯವನ್ನು(ಮಾತನ್ನು) ಅಭಿವ್ಯಕ್ತಿಸಲು ಈಗ ಏನು ಹೇಳಲಿ, ಹೇಗೆ ಹೇಳಲಿ ಎಂದು ಯಾರನ್ನೂ ಯಾವುದನ್ನೂ ಮಕ್ಕಳು ಕೇಳಬೇಕಾಗಿ ಬರುವುದಿಲ್ಲ.

ಬರವಣಿಗೆಯೂ ಅಭಿವ್ಯಕ್ತಿಯೇ. ಇದರಲ್ಲಿ ಚಿಹ್ನೆಗಳ(ಸಂಕೇತಗಳ) ನೆರವಿನಿಂದ ಅಭಿವ್ಯಕ್ತಿಸಲಾಗುತ್ತದೆ. ಆಡುಮಾತಿನ ಧ್ವನಿಗಳ ಕೆಲವು ಚಿಹ್ನೆಗಳನ್ನು(ಸಂಕೇತಗಳನ್ನು) ನಿರ್ಧರಿಸಲಾಗುತ್ತದೆ. ಮತ್ತು ಈ ಚಿಹ್ನೆಗಳನ್ನು(ಸಂಕೇತಗಳನ್ನು) ಬರೆದು ಮಾತನ್ನು ವ್ಯಕ್ತಪಡಿಲಾಗುತ್ತದೆ. ಮಾತನಾಡುವುದರಲ್ಲಿ ಹೇಗೆ ಅಭಿವ್ಯಕ್ತಿಗೆ ಸ್ವಾತಂತ್ರ್ಯವಿರುವುದು ಮಹತ್ವಪೂರ್ಣವೋ ಬರವಣಿಗೆಯಲ್ಲೂ ಅಭಿವ್ಯಕ್ತಿಗೆ ಸ್ವ್ರಾತಂತ್ರ್ಯ ವಿರುವುದು ಮಹತ್ವಪೂರ್ಣವಾದ್ದು. ಮಕ್ಕಳು ಅವರ ಬುದ್ಧಿ(ಗ್ರಹಣ ಶಕ್ತಿ)ಯಲ್ಲಿದ್ದದ್ದನ್ನೇ, ಅದು ಶಬ್ದವಾಗಬಹುದು, ಭಾವನೆಗಳಾಗಬಹುದು, ಪ್ರಶ್ನೆಯಾಗಬಹುದು, ಅವರು ನೋಡಿರುವ ಯಾವುದಾದರೊಂದರ ವಿವರಣೆಯಾಗಬಹುದು ಏನನ್ನೇ ಆದರೂ ಅವರು ಅಭಿವ್ಯಕ್ತಿಸಲಿಚ್ಛಿಸಿದಾಗ ಅದನ್ನು ಚಿಹ್ನೆಗಳ(ಸಂಕೇತಗಳ) ನೆರವಿನಿಂದ ಬರೆಯತೊಡಗಿದರು.

ಬರವಣಿಗೆ ಕುರಿತಂತೆ ಹೇಳಬೇಕೆಂದರೆ ಮಕ್ಕಳು ಶಾಲೆಗೆ ಹೋಗಿಯೇ ಬರೆಯುವುದನ್ನು ಕಲಿಯುತ್ತಾರೆ ಎಂಬುದನ್ನು ಒಪ್ಪಬೇಕು. ಇದರ ಒಂದು ಕಾರಣ ಬರವಣಿಗೆಯನ್ನು ಬಹಳ ಸೀಮಿತವಾದ ಅರ್ಥದಲ್ಲಿ ತಿಳಿಯಲಾಗಿದೆ. ಈ ತಿಳಿವಿನ ಪ್ರಕಾರ ಅಕ್ಷರಗಳು ಮತ್ತು ಸ್ವರ ಸೂಚಕ ರೇಖೆಗಳನ್ನು ಗುರುತಿಸುವುದು, ಪಠ್ಯಪುಸ್ತಕದಲ್ಲಿರುವಂತೆ ಅಥವಾ ಶಿಕ್ಷಕರು ಇಲ್ಲವೆ ಹಿರಿಯರು ಬರೆದಂತೆ ಯಥಾವತ್ತಾಗಿ ಹಾಗೆ ಹಾಗೆಯೇ ಬರೆಯುವುದು ಮತ್ತು ಅವುಗಳಿಂದ ಶಬ್ದ ಅಥವಾ ವಾಕ್ಯಗಳನ್ನು ಮಾಡುವುದು. ಹೀಗೆ ಮಾಡಲು ಏನನ್ನೇ ಮಾಡಿದರೂ– ಅದು ವರ್ಣಮಾಲೆಯನ್ನು ಮತ್ತೆ ಮತ್ತೆ ಬರೆಯುವುದಾಗಲಿ, ಶಬ್ದಗಳನ್ನು ಕಾಪಿ ಬರೆಯವುದಾಗಲಿ– ಇದೇ ಬರೆಯುವುದು. ಹೀಗೆಯೇ ಅವರು ಬರೆಯುವುದನ್ನು ಕಲಿಯುತ್ತಾರೆ.

ಆದರೆ ಇದು ಬರವಣಿಗೆಯೆ? ವೈಗೋಟ್ಸ್ ಕೀ ಅವರು ತಮ್ಮ ಸಂಪ್ರಬಂಧ "ಪ್ರಿ ಹಿಸ್ಟರಿ ಆಫ್ ದಿ ರಿಟನ್ ಲ್ಯಾಂಗ್ವೇಜ್" ನಲ್ಲಿ " ಮಕ್ಕಳಿಗೆ ಬರವಣಿಗೆಯ ಭಾಷೆಯನ್ನು ಕಲಿಸಬೇಕು; ಕೇವಲ ಲಿಪಿಯನ್ನು ಕಲಿಸುವುದಲ್ಲ" (children should be taught written language and not just the writing of letters, VYgotsky, 1978,P. 119). ಇದರ ಆಶಯ ಲಿಖಿತ ಭಾಷೆ ಮತ್ತು ಅಕ್ಷರ ಬರೆಯುವುದು ಎರಡೂ ಬೇರೆ ಬೇರೆ ವಿಚಾರಗಳು ಎಂದು. ಇದರಿಂದಲೇ ಬರವಣಿಗೆಯ ಭಾಷೆ ಕಲಿಸುವುದು ಮತ್ತು ಅಕ್ಷರ ಕಲಿಸುವುದು ಎರಡೂ ಬೇರೆ ಬೇರೆ ವಿಚಾರಗಳು.

ಅಕ್ಷರಗಳನ್ನು ಬರೆಯುವುದು ಮತ್ತು ಬರವಣಿಗೆಯ ಭಾಷೆ ಕಲಿಯುವುದರಲ್ಲಿರುವ ವ್ಯತ್ಯಾಸವೇನು ಎಂಬುದನ್ನು ತಿಳಿಯಲು ಒಂದು ವಿಧಾನ ಇದೆ. ಅದೆಂದರೆ, ನಾವೇ ಸ್ವತಃ ಯಾವುದಾದರೊಂದು ವಿಷಯದ ಬಗ್ಗೆ ಬರೆಯುವುದು ಮತ್ತು ನಾವು ಏನು ಬರೆದಿದ್ದೇವೆ ಎಂಬುದನ್ನು ತಿಳಿಯಲು ಪ್ರಯತ್ನಿಸುವುದು. ಬರೆಯುವಾಗ ನಾವು ಏನೇನು ಮಾಡಬೇಕಾಯಿತು? ನಮಗೆ ಅಕ್ಷರಗಳು, ಸ್ವರ ಸೂಚಕ ಚಿಹ್ನೆಗಳು, ಶಬ್ದಗಳಲ್ಲಿರುವ ವರ್ಣಗಳು, ಅವುಗಳ ಕ್ರಮ ಮತ್ತು ಉಚ್ಚಾರಣಾ ರೀತಿ ಇದೆಲ್ಲದರ ಜ್ಞಾನವೂ ಇದೆ. ಆದರೆ ನಾವು ಬರೆಯಲು ತೊಡಗಿದಾಗ ಇದಷ್ಟೇ ಸಾಕಾಗುವುದಿಲ್ಲ ಎಂಬುದು ಅನುಭವಕ್ಕೆ ಬರುತ್ತದೆ.

ಇನ್ನೊಂದು ಸಂಗತಿ ಏನೆಂದರೆ ಅವರುಗಳು, ಮಕ್ಕಳಾಗಿರಲಿ, ತರುಣರಾಗಿರಲಿ, ಅಥವಾ ಹಿರಿಯರಾಗಿರಲಿ ಅವರೆಲ್ಲರಿಗೂ ಅಕ್ಷರಗಳು, ಸ್ವರ ಸೂಚಕ ಚಿಹ್ನೆಗಳು, ಶಬ್ದಗಳಲ್ಲಿರುವ ವರ್ಣಗಳು, ಅವುಗಳ ಕ್ರಮ ಮತ್ತು ಉಚ್ಚಾರಣಾ ರೀತಿ ಇದೆಲ್ಲವೂ ಚೆನ್ನಾಗಿ ಬರುತ್ತದೆ ಎಂಬುದು ಗೊತ್ತಿದೆ. ಅಂಥವರೂ ಯಾವುದೇ ವಿಷಯ/ ಸಂಗತಿ ಕುರಿತು ಬರೆಯುವ ಪ್ರಯತ್ನ ಮಾಡಲು ಹೆದರುತ್ತಾರೆ ಎಂಬುದನ್ನೂ ಕಂಡುಕೊಳ್ಳಲಾಗಿದೆ. ಆದ್ದರಿಂದ ಕೇವಲ ಅಕ್ಷರಗಳ, ಸ್ವರ ಸೂಚಕ ಚಿಹ್ನೆಗಳ ಜ್ಞಾನ ಇರುವುದು, ಅವುಗಳನ್ನು ಬರೆಯುವುದು, ಶಬ್ದಗಳಲ್ಲಿರುವ ವರ್ಣಗಳು, ಅವುಗಳ ಕ್ರಮ ಮತ್ತು ಉಚ್ಚಾರಣಾ ರೀತಿ ಇವುಗಳನ್ನು ಬರೆಯುವುದಲ್ಲ ಎಂಬುದಂತೂ ನಿಶ್ಚಿತವಾದಂತಾಯಿತು. ನಾವು ಬರೆಯುವಾಗ ಈ ಸಂಕೇತಗಳನ್ನು

ತಿಳಿದುಕೊಂಡಿದ್ದರಷ್ಟೇ ಸಾಕಾಗುವುದಿಲ್ಲ; ಇನ್ನೂ ಏನೋ ಸ್ವಲ್ಪ ಬೇಕಾಗುತ್ತದೆ ಎಂಬುದನ್ನು ಒಪ್ಪೋಣ. ಮತ್ತು ಅದೆಂದರೆ ಬರೆಯಬೇಕಾದ ವಸ್ತು ಅಥವಾ ವಿಚಾರ.

ಈ ವಿಷಯ ವಸ್ತು ಯಾವುದೇ ವಿಚಾರವಾಗಿರಬಹುದು. ಯಾವುದೇ ವಸ್ತುವಿನ, ಘಟನೆಯ, ಯಾವುದೇ ಒಂದು ಸ್ಥಿತಿಯ ವಿವರಣೆಯಾಗಿರಬಹುದು, ಯಾವುದೇ ಒಂದು ಭಾವನೆ ಆಗಿರಬಹುದು, ಪ್ರಶ್ನೆ, ಭ್ರಮೆ ಇತ್ಯಾದಿಯೂ ಆಗಿರಬಹುದು. ಒಬ್ಬ ವ್ಯಕ್ತಿ ತನಗೇ ಅಥವಾ ಇತರೆಯವರಿಗೆ ಹೇಳಲಿಚ್ಛಿಸುವಂಥ ಯಾವುದೇ ವಸ್ತು ಆಗಿರಬಹುದು. ಮೇಲೆ ಹೇಳಿದಂತೆ ಮಾತಿನ ಹಾಗೆಯೇ ಬರೆಯುವುದು ಕೂಡ ತನ್ನ ವಿಷಯ, ವಿಚಾರವನ್ನು ಹೇಳುವ ಅಭಿವ್ಯಕ್ತಿಸುವ ಒಂದು ವಿಧಾನ, ರೀತಿ. ಬರವಣಿಗೆಯ ಭಾಷೆಯಲ್ಲಿ ಈ ಧ್ವನಿಗಳಿಗೆ ನಿಶ್ಚಿತವಾಗಿರುವ ಚಿಹ್ನೆಗಳನ್ನು(ಸಂಕೇತಗಳನ್ನು) ಬಳಕೆಮಾಡಿಕೊಂಡು ನಾವು ನಮ್ಮ ಮಾತನ್ನು, ವಿಚಾರವನ್ನು ಹೇಳುತ್ತೇವೆ. ಅದು ಮೌಖಿಕ ಭಾಷೆಯಾಗಿರಲಿ ಇಲ್ಲವೆ ಬರವಣಿಗೆಯ ಭಾಷೆಯಾಗಿರಲಿ ಎರಡಕ್ಕೂ ವಿಚಾರ ಇರಲೇಬೇಕು. ಹೀಗೆ ಬರೆಯುವುದು ಎಂದರೆ ನಮ್ಮ ವಿಚಾರಗಳನ್ನು ಬೇರೆ ಬೇರೆ ಚಿಹ್ನೆಗಳ ನೆರವಿನಿಂದ ಅಭಿವ್ಯಕ್ತಿಸುವುದು.. ಮುಂದಿನ ಭಾಗದಲ್ಲಿ ಮಕ್ಕಳು ಬರವಣಿಗೆಯಲ್ಲಿ ಅಭಿವ್ಯಕ್ತಿಸುವುದನ್ನು ಹೇಗೆ ಕಲಿಯುತ್ತಾರೆ ಈ ಬಗ್ಗೆ ವಿಸ್ತಾರವಾಗಿ ಚರ್ಚಿಸಲಾಗಿದೆ.

**ಬರವಣಿಗೆಯ ಪ್ರಾರಂಭ– ಕೆಲವೊಂದು ಅವಲೋಕನಗಳು**

ಮಕ್ಕಳು ಈ ಜಗತ್ತಿನ ಪ್ರತಿಯೊಂದು ವಸ್ತುವಿನ ಬಗ್ಗೆ ತಿಳಿದುಕೊಳ್ಳಲು ಉತ್ಸುಕರಾಗಿರುವುದಷ್ಟೇ ಅಲ್ಲ; ಅದನ್ನು ತಿಳಿದುಕೊಳ್ಳಲು ನಿರಂತರವಾಗಿ ಪ್ರಯತ್ನಿಸುತ್ತಲೂ ಇರುತ್ತಾರೆ. ಮತ್ತು ತಮ್ಮ ಈ ಪ್ರಯತ್ನದಲ್ಲಿ ಅವರು ಅನೇಕ ಸಂಗತಿಗಳನ್ನು(ವಸ್ತುಗಳನ್ನು) ಕಲಿಯುತ್ತಾರೆ. ಬರವಣಿಗೆಯೂ ಅವರ ಪಾಲಿಗೆ ಒಂದು ಹೊಸ ಅನುಭವವಾಗಿರುತ್ತದೆ. ಅಲ್ಲದೆ ಇದನ್ನು ಕಲಿತುಕೊಳ್ಳಲು ಅವರು ಸಹಜ ಪ್ರಯತ್ನ ಮಾಡುತ್ತಾರೆ. ಈ ಸಹಜ ಪ್ರಯತ್ನಗಳಲ್ಲಿ ಬೇರೆ ಬೇರೆ ಸಮತಲಗಳ ಮೇಲೆ(=ಫಲಕಗಳ ಮೇಲೆ) ಎಲ್ಲಿ ಗೀಚುವುದು(= ಕೆತ್ತುವುದು) ಸೇರಿರುತ್ತದೆಯೋ ಅಲ್ಲೇ ಬೇರೆ ಬೇರೆ ಥರದ ಲೇಖನಿಗಳು/ಪೆನ್ನುಗಳ ಬಗ್ಗೆ ತಿಳಿಯುವುದು ಕೂಡ ಇರುತ್ತದೆ.

ಮಕ್ಕಳು ಮೂರು ಮೂರೂವರೆ ವಯಸ್ಸಿಗೆ ಬರುವ ಹೊತ್ತಿಗೆಲ್ಲ ಪೆನ್ನು, ಪೆನ್ಸಿಲ್, ಚಾಕ್, ಮೊದಲಾದ ವಸ್ತುಗಳನ್ನು ತೆಗೆದುಕೊಂಡು ಬೇರೆ ಬೇರೆ ಆಕೃತಿಗಳನ್ನು ಮಾಡುವುದನ್ನು ಪ್ರಾರಂಭಿಸಿಯೇ ಬಿಡುತ್ತಾರೆ.

ಬಾಯಿಮಾತಿನ(=ಮೌಖಿಕ) ಭಾಷೆಗೆ ಸಮೃದ್ಧವಾಗಿ ಸಂದರ್ಭಗಳು ಲಭ್ಯವಿರುವ ಹಾಗೆ ಬರವಣಿಗೆಯ ಭಾಷೆಗೆ ಸಾಮಾನ್ಯವಾಗಿ ಲಭ್ಯವಿರುವುದಿಲ್ಲ ಎನ್ನುವುದು ನಮಗೆಲ್ಲಾ ತಿಳಿದಿದೆ. ಹೀಗಿದ್ದೂ ವಿಭಿನ್ನ ಸಮತಲಗಳನ್ನು(=ಫಲಕ ಅಥವಾ ಹಾಸು) ನೋಡುತ್ತ ಅವುಗಳ ಮೇಲೆ ಸ್ವಲ್ಪ ಸ್ವಲ್ಪ ಗೀಚಲು(=ಕೆತ್ತಲು) ಆರಂಭಿಸುತ್ತಾರೆ. ಈ ಹಂತದಲ್ಲಿ ಅವರು ಬರೆಯುವುದನ್ನು ಕಲಿಯುವುದನ್ನು ಅರಂಭಿಸುವುದಷ್ಟೇ ಅಲ್ಲ, ಅದರ ಜೊತೆಜೊತೆಯಲ್ಲೇ ಇನ್ನೂ ಒಂದಷ್ಟನ್ನು ಕಲಿಯುತ್ತಿರುತ್ತಾರೆ: ಬೇರೆ ಬೇರೆ ಸಮತಲಗಳನ್ನು( ಫಲಕಗಳನ್ನು) ತಿಳಿದುಕೊಳ್ಳುವುದು, ಬೇರೆ ಬೇರೆ ಲೇಖನಿ(ಬರೆಯುವ ಸಾಧನ)ಗಳನ್ನು ತಿಳಿದುಕೊಳ್ಳುವುದು, ಯಾವ ಸಾಧನ (ಲೇಖನಿ) ಯಾವ ಸಮತಲದ ಮೇಲೆ ಓಡುತ್ತದೆ, ಯಾವುದರ ಮೇಲೆ ಓಡುವುದಿಲ್ಲ, ಯಾವ ಯಾವ ಬಗೆಯ ಆಕೃತಿಗಳು ಸಿದ್ಧವಾಗುತ್ತವೆ ಇತ್ಯಾದಿಗಳು. ಕಾರಣ ಅವರಿಗೆ ಎಲ್ಲವೂ ಹೊಸತು. ಪೆನ್ನು, ಪೆನ್ಸಿಲ್ ಕೂಡ ಹೊಸವೇ. ಫಲಕಗಳೂ ಹೊಸವು.

**ನಾವುಗಳು ಜಗತ್ತನ್ನು ತುಂಡು ತುಂಡಾಗಿ ವಿಭಾಗಿಸಿ ನೋಡುವಂತೆ ನೋಡದೆ ಮಕ್ಕಳು ಇಡಿಯಾಗಿ ನೋಡುತ್ತಾರೆ.**





ಸರಿಸುಮಾರು ಎಲ್ಲ ಮಕ್ಕಳ ಪ್ರಾರಂಭದ ಆಕೃತಿಗಳು ಹೆಚ್ಚು ಕಡಿಮೆ ಹೀಗೆಯೇ ಇರುತ್ತವೆ. ಇವುಗಳನ್ನು ನೋಡಿದರೆ ಮಕ್ಕಳು ಬರಹದ ಅಭಿವ್ಯಕ್ತಿಯನ್ನು ಕಲಿಯುವ ದಿಕ್ಕಿನಲ್ಲಿ ಕಿಂಚಿತ್ ಪ್ರಾರಂಭ(ಮೊದಲು) ಮಾಡುತ್ತಿದ್ದಾರೆಂದು ಹೇಳಬಹುದೆ?

ಈ ಚಿತ್ರಗಳನ್ನು ನೋಡಿದ ಮೇಲೆ ಕೆಲವು ವಿಷಯಗಳು ಸ್ಪಷ್ಟವಾಗಿ ಗೊತ್ತಾಗುತ್ತವೆ. ಬೇರೆ ಬೇರೆ ಸಮತಲಗಳನ್ನು(= ಫಲಕಗಳನ್ನು) ಒಟ್ಟುಗೂಡಿಸಿದ್ದಾರೆ. ಗೋಡೆ, ಕಾಗದ, ಬಾಗಿಲು ಮೊದಲಾದುವು. ಬರೆಯಲು ಪೆನ್ನು, ಪೆನ್ಸಿಲ್ಲು, ಬಣ್ಣದ ಬಳಕೆ ಮಾಡಿದ್ದಾರೆ. ಆದರೆ ನೆಲ, ಅಲಮಾರುಗಳ ಹಲಗೆ, ವರ್ತಮಾನ ಪತ್ರಿಕೆಗಳ ತುಣುಕುಗಳು, ಹಸಿ ಮಣ್ಣು, ಮರಳು ಮೊದಲಾದ ಇನ್ನಿತರೆ ಸಮತಲಗಳೂ(ಫಲಕಗಳೂ) ಆಗಬಹುದು. ಹೀಗೆಯೇ ಯಾವ ಸಮತಲದ(ಫಲಕದ) ಮೇಲೆ ಯಾವ ಥರದ ಲೇಖನಿ ಓಡುತ್ತದೆ ಎಂಬುದರ ತಿಳಿವಳಿಕೆಯನ್ನೂ ಅವರೇ ಬೆಳೆಸಿಕೊಳ್ಳುತ್ತಾರೆ. ಆಕೃತಿಗಳನ್ನು ಕೆತ್ತುವ (=ಬಿಡಿಸುವ) ಈ ಪ್ರಯತ್ನಗಳ ಜೊತೆ ಜೊತೆಗೇ ಬರವಣಿಗೆಗೆ ಬಳಸಲು ಬರುವ ವಸ್ತುಗಳನ್ನು ಅವರೇ ಕಂಡುಕೊಳ್ಳುತ್ತಾರೆ. ಬೇರೆ ಬೇರೆ ಸಮತಲಗಳ(=ಫಲಕಗಳ) ಮೇಲೆ ಬರೆಯುವುದನ್ನು(ಗೀಚುವುದನ್ನು) ಮಕ್ಕಳು ಸ್ವತಃ ತಾವೇ ಶುರು ಮಾಡುತ್ತಾರೆ. ಹಲವು ಜಾಗಗಳಲ್ಲಿ ಬರೆಯುತ್ತಾರೆ.( ಕಾಗದ ಮತ್ತು ಪೆನ್ನು ಇರಲೇಬೇಕೆದಿಲ್ಲ. ಆದರೆ, ಸ್ಲೇಟು, ಬಳಪ, ಸೀಮೆಸುಣ್ಣ, ಮಣ್ಣು, ಕಡ್ಡಿ, ಗೋಡೆ, ಇಜ್ಜಲು, ಯಾವುದರಿಂದಾದರೂ). ಈ ಬರೆಯುವಿಕೆಯಲ್ಲಿ (ಕೆತ್ತುವಿಕೆ) ಅವರುಗಳು ಈ ವಸ್ತುಗಳ ಬೇರೆ ಬೇರೆ ಗುಣಗಳನ್ನು ತಿಳಿದುಕೊಳ್ಳುತ್ತ , ಫಲಕಗಳು ಹೇಗಿರುತ್ತವೆ, ಅವುಗಳ ಮೇಲೆ ಯಾವ ರೀತಿಯ ಲೇಖನಿಗಳು ಓಡುತ್ತವೆ ಎಂಬ ತಿಳಿವನ್ನೂ ಬೆಳೆಸಿಕೊಳ್ಳುತ್ತಿರುತ್ತಾರೆ. ಇಟ್ಟಿಗೆ ಮತ್ತು ಇದ್ದಿಲಿನಿಂದ ನೆಲದ ಮೇಲೆ ಏನನ್ನಾದರೂ ಮಾಡಬಹುದು ಆದರೆ ಪೆನ್ನಿನಿಂದ ಮಾಡಲಾಗುವುದಿಲ್ಲ ಎಂಬುದನ್ನು ತಿಳಿದುಕೊಳ್ಳುತ್ತಾರೆ. ಮರದ ಒಂದು ಕಡ್ಡಿ (= ಕೋಲು) ಇದ್ದರೆ ಮಣ್ಣಿನ ಮೇಲೆ ಕೂಡ ಏನನ್ನಾದರೂ ಅಂಕಿಸಬಹುದು (ಗೀಚಬಹುದು)ಎಂಬುದನ್ನು ತಿಳಿದುಕೊಳ್ಳುತ್ತಾರೆ. ಮಕ್ಕಳಿಗೆ ಎರಡು, ಮೂರು ಅಥವಾ ಇನ್ನೂ ಹೆಚ್ಚಿಗೆ ಚಾಕ್ ಪೀಸ್ ಕೊಟ್ಟರೂ ಕೆಲವೇ ನಿಮಿಷಗಳಲ್ಲಿ ಅವರು ಅವನ್ನು ಮುಗಿಸಿಬಿಡುವುದನ್ನು ನಿಮ್ಮಲ್ಲಿ ಹಲವರು ನೋಡಿರಬಹುದು. ಪೆನ್ಸಿಲ್ ಕೊಟ್ಟರೆ ಅವರು ಅದನ್ನು ಹೆರೆಯುತ್ತಾ ಇರುವುದನ್ನು ನೋಡಬಹುದು, ಕ್ರೇಯಾನ್ ಅವರ ಹತ್ತಿರ ಇದ್ದರೆ ಅವುಗಳ ರ್‍ಯಾಪರ್ ಕಿತ್ತುಹಾಕಿ ಅವುಗಳನ್ನು ಹರಿದು ಹರಿದು ನೋಡಬಯಸುತ್ತಾರೆ. ಪೆನ್ಸಿಲ್, ಚಾಕ್, ಕ್ರೇಯಾನ್ ಗಳನ್ನು ಸಮತಲಗಳ(=ಫಲಕಗಳ) ಮೇಲೆ ಓಡಿಸುವುದಷ್ಟೇ ಅಲ್ಲ, ಅವುಗಳನ್ನು ಮುರಿದು ಬೇರೆ ಬೇರೆ ರೀತಿಯಲ್ಲಿ ಒತ್ತಿ, ಊರಿ ಹೇಗೆ ಹೇಗೆಲ್ಲ ಬರೆಯಬಹುದು ಅಂತ ನೋಡುತ್ತಾರೆ. ಕಾಪಿ ಪುಸ್ತಕ ಕೊಟ್ಟರೆ ಒಂದೇ ದಿನದಲ್ಲಿ ಅದರ ಪುಟಗಳನ್ನೆಲ್ಲಾ ಮುಗಿಸಿಹಾಕುತ್ತಾರೆ. ಪೆನ್ಸಿಲ್, ಚಾಕ್, ಕ್ರೇಯಾನ್ ಅನ್ನು ಕೇವಲ ಸಮತಲಗಳ(ಫಲಕಗಳ) ಮೇಲೆ ಬಳಸುವುದಲ್ಲ, ಅವುಗಳನ್ನು ಮುರಿದುಹಾಕಿ ಅದರ ಮೇಲೆ ಬೇರೆ ಬೇರೆ ರೀತಿಯಲ್ಲಿ ಒತ್ತಿ ಅದರಮೇಲೆ ಹೇಗೆ ಬರೆಯಬಹುದು ಎಂಬುದನ್ನು ನೋಡುತ್ತಾರೆ. ಕಾಪಿ ಪುಸ್ತಕ ಕೊಟ್ಟರೆ ಒಂದೇ ದಿನದಲ್ಲಿ ಅದರ ಪುಟಗಳನ್ನೆಲ್ಲ ಮುಗಿಸಿಹಾಕುತ್ತಾರೆ.

ಆಕೃತಿಗಳನ್ನು(ಚಿತ್ರಗಳನ್ನು) ಮಾಡಲು ನಿರಂತರವಾಗಿ ಪ್ರಯತ್ನಗಳು ನಡೆಯುತ್ತಿರುತ್ತವೆ . ಅವರು ಆಕೃತಿಗಳನ್ನು ಮಾಡುತ್ತಿರುತ್ತಾರೆ. ಒಂದೊಂದು ಸಲ ಅದರ ಬಗ್ಗೆ ಮಾತಾಡಿದ್ದೂ ಆಡಿದ್ದೇ. ಇನ್ನು ಕೆಲವು ಸಲ ಮಾತೇ ಇಲ್ಲದೆ ಗಪ್ ಚುಪ್ ಆಗಿ ಇರುತ್ತಾರೆ. ನಾನೇನು ಬರೆಯಲಿ, ನನಗೆ ಬರೆಯಕ್ಕೆ ಬರಲ್ಲ, ಇದು ಸರಿಯಾಗಿ ಮಾಡಿಲ್ಲ, ಇದು ಸುಂದರವಾಗಿಲ್ಲ, ತಪ್ಪಾಗಿ ಬಿಟ್ಟಿದೆ ಹೀಗೆಲ್ಲ ಯಾವತ್ತೂ ಹೇಳಲ್ಲ. ಆಕೃತಿಗಳನ್ನು ಮಾಡಲು ಪ್ರಾರಂಭಿಸುತ್ತಾರೆ ಅಷ್ಟೆ. ಮತ್ತು ದಿನವೂ ಹೊಸ ಹೊಸ ವಸ್ತುಗಳನ್ನು ಮಾಡುತ್ತ ಖುಶಿಪಡುತ್ತಾರೆ. ಇವುಗಳನ್ನು ಅವರು ಹಿರಿಯರ ಮುಂದೆ ಇಟ್ಟು ತೋರಿಸುತ್ತಾರೆ. ಒಂದೊಂದು ಸಲ ತಾವೇನು ಬರೆದಿದ್ದೇವೆ ಎಂದು ಹಿರಿಯರು ಹೇಳಲಿ ಎಂದು ಇಚ್ಚಿಸುತ್ತಾರೆ. ಇದೇ ಸಂದರ್ಭದಲ್ಲಿ ಇನ್ನಷ್ಟು ಬರೆಯಲು ಹೇಳಿದರೆ ಸ್ವಲ್ಪವೂ ಹಿಂದೆಗೆಯದೆ ಅತ್ಯಂತ ಸಹಜವಾಗಿ ಬರೆದುಬಿಡುತ್ತಾರೆ.

ಅವರು ಬಿಡಿಸಿದ ಈ ಆಕೃತಿಗಳನ್ನು ಕೆಲವೊಮ್ಮೆ ಹಿರಿಯರಾದ ನಾವು ಕಡೆಗಣಿಸುತ್ತೇವೆ. ಬಹುಶಃ ಅದಕ್ಕೆ ಕಾರಣ 1) ಹಿರಿಯರ ದೃಷ್ಟಿಕೋನದ ಪ್ರಕಾರ ಬರೆಯುವುದಕ್ಕೆ ವಿಶೇಷ ಅರ್ಥವಿದೆ; ಆದರೆ ಅದು ಈ ಬರಹದಲ್ಲಿ ಕಂಡುಬರುತ್ತಾ ಇಲ್ಲ. 2) ಈ ವಯಸ್ಸಿನ ಬಾಲಕ ಬರೆಯಬೇಕೆಂಬ ಅಪೇಕ್ಷೆ(ನಿರೀಕ್ಷೆ) ಕೂಡ ನಮಗಿಲ್ಲ. ಬೇರೆ ಮಾತುಗಳಲ್ಲಿ ಹೇಳಬೇಕೆಂದರೆ ಅವರಲ್ಲಿ ಬರೆಯುವ ಸಾಮರ್ಥ್ಯ ಇದೆ ಅನ್ನುವುದನ್ನು ನಾವು ಒಪ್ಪುವುದಿಲ್ಲ. 3) ಬಾಲಕ ಬರೆಯುತ್ತಾ ಇರುವಾಗ ಅವನೇನು ಬರೆದ ಮತ್ತು ಯಾಕೆ ಬರೆದ ಅಂತಲೂ ನಾವು ಕೇಳುವುದಿಲ್ಲ.

ಆದರೆ ನಾವು ಹೀಗೆ ಮಾಡದೆ ಅವರ ಈ ಬರಹದ ಅಭಿವ್ಯಕ್ತಿಗಳ ಬಗ್ಗೆ ಅವರನ್ನು ಕೇಳಿದ್ದೇ ಆದರೆ–" ಇವನು ಹುಡುಗ, ಇವನು ಅಳುತ್ತಾ ಇದ್ದಾನೆ, ಮಳೆ ಬೀಳುತ್ತಾ ಇದೆ. ಅಷ್ಟು ಮಾತ್ರ ಅಲ್ಲದೆ ಎಲ್ಲ ಥರದ ಕಥೆಗಳನ್ನು ಹೇಳುವುದನ್ನು ಕಾಣಬಹುದು. ಕೆಲವೊಮ್ಮೆ ಅವರು ಹೇಳದೆಯೂ ಇರಬಹುದು. ಕೆಲವು ಸಲ –ಬರಹ ಮಾಡಿದ ಕೂಡಲೇ ಏನು ಮಾಡಿದೆ ಅಂತ ಕೇಳಿದರೆ ಅವರು ಉತ್ತರ ಕೊಡಬಹುದು. ಒಂದೆರಡು ದಿನಗಳ ನಂತರ ಕೇಳಿದರೆ ಹೇಳದೆ ಇರಬಹುದು. ಅದಕ್ಕೆ ಕಾರಣ ಬಹುಶಃ ಆ ಆಕೃತಿಗಳು ವಾಸ್ತವವಾದ ವಸ್ತುಗಳು ಇರುವುದಕ್ಕಿಂತ ಭಿನ್ನವಾಗಿರುತ್ತವೆ. ಉದಾಹರಣೆಗೆ ಅದು ಒಂದು ಗುಂಡನೆಯ ಬಿಸ್ಕತ್ತು ಆಗಬಹುದು, ಅದು ಹೂವೂ ಆಗಿರಬಹುದು, ಕಲ್ಲೂ ಆಗಿರಬಹುದು ಮತ್ತು ಬೇರೆ ಇನ್ನೇನೋ ಆಗಿರಬಹುದು. ಆದರೆ ಈ ವಸ್ತುಗಳನ್ನು ಮಾಡುವುದರಲ್ಲಿ ಸ್ವಲ್ಪ ಮಟ್ಟಿನವು ಸ್ವಂತದ್ದೂ ಆಗಿರಬಹುದು. 1) ಅದು ಏನೆಂದರೆ ಮಕ್ಕಳಿಗೆ ತಾವು ಏನನ್ನು ನೋಡುತ್ತೇವೋ, ಅನುಭವಕ್ಕೆ ತಂದುಕೊಳ್ಳುತ್ತೇವೋ ಅದನ್ನು ಬರೆದು ಅಭಿವ್ಯಕ್ತಿಸಬಲ್ಲೆವು ಎಂಬ ತಿಳಿವಳಿಕೆ ಇರುತ್ತದೆ. 2) ಬೇರೆ ಬೇರೆ ವಿಚಾರಗಳನ್ನು ಬರೆದು ಅಭಿವ್ಯಕ್ತಿಸಲು ಬೇರೆ ಬೇರೆ ಚಿಹ್ನೆಗಳ(ಸಂಕೇತಗಳ) ಅಗತ್ಯವಿರುತ್ತದೆ ಎಂಬ ತಿಳಿವಳಿಕೆ ಇರುತ್ತದೆ. ವಸ್ತುವೊಂದು ಯಾವ ರೀತಿ ಕಾಣುತ್ತದೆಯೋ ತದ್ವತ್ತಾಗಿ ಅದೇ ರೀತಿ ಅದು ಕಾಣಿಸದೆ ಹೋದರೂ ತಿಳಿಸಿಕೊಡಬಹುದು ಎಂದು ಅವರು ತಿಳಿದುಕೊಂಡಿರುತ್ತಾರೆ. ವಾಸ್ತವವಾಗಿ ಇರುವ ವಸ್ತು ಮತ್ತು ನಾನು ಮಾಡಿರುವ ವಸ್ತು ಇವುಗಳಲ್ಲಿ ಒಂದು ಹಂತದಲ್ಲಿ ಸಾಕಷ್ಟು ವ್ಯತ್ಯಾಸವಿದೆ; ಆದರೂ ಅದನ್ನು ತೋರಿಸಬಹುದು, ಇದನ್ನು ತೋರಿಸಲು ಸ್ವಲ್ಪ ಮಟ್ಟಿಗೆ ಮೂಲದೊಂದಿಗೆ ಸಮಾನತೆ ಇದ್ದರೆ ಸಾಕು ಎಂಬಂತೆ. ಮಕ್ಕಳು ನಿಧ ನಿಧಾನವಾಗಿ ಅಮೂರ್ತೀಕರಣದತ್ತ (ಮೂರ್ತವಾಗಿ ಮಾಡದಿರುವುದು) ಮುಂದುವರಿಯುತ್ತಿದ್ದಾರೆ ಎಂಬ ಸಂಗತಿಯನ್ನೂ ತಿಳಿಸುತ್ತದೆ. ಯಾವ ವಸ್ತು/ಘಟನೆಗಳನ್ನು ಅವರು ತೋರಿಸಲಿಚ್ಛಿಸುತ್ತಾರೋ ಅದರ ಸಾರವನ್ನು ಹಿಂಡಿ ತೆಗೆಯುವ ಸಾಮರ್ಥ್ಯವನ್ನು ಸಂಪಾದಿಸಿಕೊಳ್ಳುತ್ತಾರೆ. ಮೂರು ಮಾನಗಳ ಜಗತ್ತನ್ನು ಎರಡು ಮಾನಗಳಲ್ಲಿ ನಿರೂಪಿಸಬಹುದು ಮತ್ತು ತಾವೂ ಇವನ್ನು ಮಾಡಬಹುದು ಎಂಬುದನ್ನೂ ತಿಳಿದುಕೊಂಡಿರುತ್ತಾರೆ.

**ಇನ್ನು ಕೆಲವು ಚಿತ್ರಗಳು (ವಯಸ್ಸು 3.7 ಇಂದ 5 ವರ್ಷ)**

**ಚಿಹ್ನೆಗಳನ್ನು (=ಸನ್ನೆಗಳನ್ನು) ತಿಳಿಯುವುದೆಂದರೆ ಏನೇನು ಸೇರಿರುತ್ತದೆ ಮತ್ತು ಇದು ಹೇಗೆ ವಿಕಸಿತವಾಗುತ್ತದೆ ಎಂಬ ಬಗ್ಗೆ ಈಗ ಕೆಲವು ಮಾತುಗಳು**

ಅವರು ನಿರ್ಮಿಸಿದ(ರಚಿಸಿದ) ಈ ಆಕೃತಿಗಳು ವಿಶೇಷ ಆಕಾರಗಳನ್ನು ಪಡೆದುಕೊಳ್ಳಲಾರಂಭಿಸುತ್ತವೆ.–ಇವುಗಳಲ್ಲಿ ಅವರ ಸುತ್ತುಮುತ್ತಿನ ಪರಿಸರದ ಇಣುಕು ನೋಟ(ಹೊಳಹು) ಸಿಗುತ್ತದೆ. ಅದರಲ್ಲಿ–ಮರ, ಗಿಡ, ಮನುಷ್ಯ, ಸೂರ್ಯ, ಮಳೆ,

ಮೋಡ, ಹುಲ್ಲು, ಬಗೆಬಗೆಯ ಕೀಟಗಳು, ಪ್ರಾಣಿಗಳು ಕಾಣಿಸತೊಡಗುತ್ತವೆ. ಆಕೃತಿಯಲ್ಲಿ ಸೇರಿರುವ ವಿವರಗಳ



.

**ದೃಷ್ಟಿಯಿಂದ ಮತ್ತು ಇಡೀ ಸಂದರ್ಭದ ವಿವರದ ದೃಷ್ಟಿಯಿಂದಲೂ** ವಯಸ್ಸು ಹೆಚ್ಚಿದಂತೆಲ್ಲ ಈ ಆಕೃತಿಗಳು

ವಿಸ್ತರಿಸುತ್ತ(ದೊಡ್ಡವಾಗುತ್ತ) ಹೋಗುತ್ತವೆ. ಈಗ ಕಾಲ್ಪನಿಕವಾದ ಮತ್ತು ಸುತ್ತಮುತ್ತ ಕಾಣದಿರುವಂಥ ಆಕೃತಿಗಳನ್ನೂ ಮಾಡತೊಡಗುತ್ತಾರೆ. ಏನನ್ನು ವ್ಯಕ್ತಪಡಿಸಬೇಕು, ಹೇಗೆ ವ್ಯಕ್ತಪಡಿಸಬೇಕು ಇದರ ತಿಳುವಳಿಕೆಯೂ ಹೆಚ್ಚುತ್ತ ಹೋಗುತ್ತದೆ. ನಿಧನಿಧಾನವಾಗಿ ಅವರು ಏನೇನನ್ನು ಮಾಡಬಹುದು(ರಚಿಸಬಹುದು) ಎಂಬುದರ ತಿಳಿವಳಿಕೆಯ ಪ್ರಭುತ್ವವನ್ನೂ ಪಡೆದುಕೊಳ್ಳುತ್ತಾರೆ. ತೀರಾ ನಗಣ್ಯವಾಗಿದ್ದರೂ ಅವುಗಳ ಕೆಲವು ನಿದರ್ಶನಗಳನ್ನು ಇಲ್ಲಿ ನೀಡಲಾಗಿದೆ.

**ಇನ್ನೂ ಕೆಲವು ಚಿತ್ರಗಳು(ವಯಸ್ಸು 5ರಿಂದ 6.4 ವರ್ಷ)**




ಮಕ್ಕಳು ರಚಿಸಿದ ಈ ಚಿತ್ರಗಳು ಅವರ ಬರವಣಿಗೆಯ ಸಂದರ್ಭದಲ್ಲಿ ಬಹಳಷ್ಟು ಸಂಗತಿಗಳನ್ನು ತಿಳಿಯುವಲ್ಲಿ ನೆರವಾಗುತ್ತವೆ. ಚಿತ್ರಗಳಲ್ಲಿ ಅವರ ಸುತ್ತುಮುತ್ತಿನ ವಾತಾವರಣದ ಒಂದು ಇಣುಕು ನೋಟವಿದೆ. ಚಿತ್ರಗಳಲ್ಲಿ ನಾನಾ ಬಗೆಯ ವಿವರಗಳಿವೆ. ವಯಸ್ಸು ಹೆಚ್ಚಿದಂತೆಲ್ಲ ಚಿತ್ರಗಳಲ್ಲಿ ವಿವರಗಳು ಹೆಚ್ಚಾಗುತ್ತ ಹೋಗುತ್ತವೆ. ಮತ್ತು ಇದು ತನಗೆ ತಾನೇ ಆಗುತ್ತದೆ. ಅವರು ಈ ಚಿತ್ರಗಳ ಬಗ್ಗೆ ಮಾತನಾಡುತ್ತಾರೆ. ಇವುಗಳ ಮೇಲೆ ಕಥೆಗಳನ್ನು ಕಟ್ಟುತ್ತಾರೆ ಮತ್ತು ಯಾರಾದರೂ ಕೇಳುವವರಿದ್ದರೆ ಕಥೆಗಳನ್ನು ಹೇಳುತ್ತಾರೆ ಕೂಡ. ಅಲ್ಲದೆ ತಾವು ರಚಿಸಿದ ಚಿತ್ರಗಳನ್ನು ಬೇರೆಯವರಿಗೆ ತೋರಿಸಿ ತಾವು ಬರೆದದ್ದು ಗೊತ್ತಾಯಿತೆ ಇಲ್ಲವೆ ಎಂಬುದನ್ನು ತಿಳಿಯ ಬಯಸುತ್ತಾರೆ– ಒಬ್ಬ ಲೇಖಕನು ತಾನು ಬರೆದ ಲೇಖನವನ್ನು ಹಂಚಿಕೊಂಡು ತನ್ನ ಬರಹ ಅರ್ಥವಾಯಿತೋ ಇಲ್ಲವೋ ಎಂದು ಕೇಳಿ ತಿಳಿಯುವ ರೀತಿಯಲ್ಲಿಯೇ.

ಇದು ಅವರ ಅವಲೋಕನದ, ಸೂಕ್ಷ್ಮ ಅವಲೋಕನದ ಸಾಮರ್ಥ್ಯ ಹೆಚ್ಚುತ್ತಿದೆಯೆಂಬುದನ್ನಷ್ಟೇ ಅಲ್ಲದೆ ಆ ಅವಲೋಕನವನ್ನು ದಾಖಲಿಸುವ ಮತ್ತು ಬೇರೆಯವರಿಗೂ ಅರ್ಥವಾಗುವ ಹಾಗೆ ದಾಖಲಿಸಬೇಕೆಂಬ ತಿಳುವಳಿಕೆ ಕೂಡ ಅವರಲ್ಲಿ ಬೆಳವಣಿಗೆಯಾಗುತ್ತಿದೆ ಎಂಬುದನ್ನು ತಿಳಿಸುತ್ತದೆ. ಚೆನ್ನಾಗಿ ಬರಹ ಕಲಿಯಲು ಇದು ಅತ್ಯಂತ ಅಗತ್ಯ.






ಈ ಚಿತ್ರಗಳಲ್ಲಿ ಅವನ ಯೋಚಿಸುವ ಶಕ್ತಿಯಲ್ಲಿ ಅಥವಾ ಹೇಳಬೇಕೆಂದರೆ ಕಲ್ಪನೆಯ ಶಕ್ತಿಯಲ್ಲಿ ಬೆಳವಣಿಗೆ ಆಗುತ್ತಿದೆ ಎಂಬುದು ಸ್ಪಷ್ಟವಾಗಿ ಕಂಡು ಬರುತ್ತಿದೆ. ಅಕ್ಕ ಪಕ್ಕದವುಗಳನ್ನು ಕಲಿಸುವ  ಇಂಥ ಅಭಿವ್ಯಕ್ತಿಗಳೇ ಅಲ್ಲ, ವಾಸ್ತವಕ್ಕೆ ಹೊರತಾದ ವಸ್ತುಗಳೂ ಇರುತ್ತವೆ. ಇಂಥ ಬಹಳಷ್ಟು ನಿದರ್ಶನಗಳು ಮಕ್ಕಳ ಬರವಣಿಗೆಯ ಅಭಿವ್ಯಕ್ತಿಗಳಲ್ಲಿ ಕಂಡುಬರುತ್ತವೆ.

ಬರೆಯಲು ಬೇಕಾದ ಸ್ಥಳದ ಬಗ್ಗೆಯೂ ತಿಳುವಳಿಕೆ ಇರಬೇಕಾದ್ದು ಅಗತ್ಯ. ಜೊತೆಗೆ ಚಲನಶೀಲ ಕೌಶಲಗಳು(ಗತ್ಯಾತ್ಮಕ ಕೌಶಲ= ಮೋಟಾರ್ ಸ್ಕಿಲ್) ಇರುವುದೂ ಅಗತ್ಯ. ದೇಹದ ಬೆಳವಣಿಗೆಯಾದಂತೆಲ್ಲ ಚಲನಶೀಲ ಕೌಶಲಗಳ ಬೆಳವಣಿಗೆ ಆಗುತ್ತದೆ. ಅವರು ಪೆನ್ಸಿಲ್ ಹಿಡಿಯುವುದು, ಮನಸ್ಸಿಗೆ ಬಂದ ಹಾಗೆ ಅವುಗಳನ್ನು ಚಲಿಸುವುದು, ಕಣ್ಣುಗಳ ಚಲನೆಯು ಅದನ್ನು ಅನುಸರಿಸುವ ಸಾಮರ್ಥ್ಯದಲ್ಲೂ ಬೆಳವಣಿಗೆಯಾಗುತ್ತದೆ. ಜಾಗದ(=ಸ್ಥಳದ) ತಿಳಿವಳಿಕೆಯೂ ಬೆಳವಣಿಗೆಯಾಗತೊಡಗುತ್ತದೆ. ಚಿಕ್ಕ ಚಿತ್ರ ಎಲ್ಲಿ ಬರೆಯಬಹುದು, ದೊಡ್ಡದನ್ನು ಎಲ್ಲಿ ಬರೆಯಬಹುದು ಹೀಗೆ ಸಮತಲದ(ಫಲಕದ) ಆಕಾರವನ್ನು ನೋಡುತ್ತ ಚಿತ್ರ ಬರೆಯುವುದೇ ಮೊದಲಾದವು. ಮತ್ತು ಈ ಚಿತ್ರಗಳು ಈ ಕೌಶಲಗಳು ಹೇಗೆ ಬೆಳವಣಿಗೆಯಾಗುತ್ತ ಹೋಗುತ್ತವೆಂಬುದನ್ನು ತಿಳಿಸುತ್ತವೆ. ಬಗೆಬಗೆಯ ಆಕೃತಿಗಳನ್ನು ರಚಿಸುವುದು ಇದರಲ್ಲಿ ಅವರಿಗೆ ನೆರವಾಗುತ್ತದೆ. ಲೇಖನಿಯ ಮೇಲಿನ ಅವರ ಹಿಡಿತ ಗಟ್ಟಿಯಾಗುತ್ತ ಹೋಗುತ್ತದೆ. ಮಕ್ಕಳು ಗೆಲ್ಲಲು ಈ ಥರದ ಕೆಲಸಗಳನ್ನು ಹೆಚ್ಚು ಮಾಡಲು ಇಷ್ಟಪಡುತ್ತಾರೆ. ಮಾಡಲು ಅವರನ್ನು ಬಿಡಬೇಕು.

ಇದರಲ್ಲಿ ಮಕ್ಕಳು ಬೇರೆ ಬೇರೆ ವರ್ಷಗಳಲ್ಲಿ ಮಾಡಿರುವ(ರಚಿಸಿರುವ) ಚಿತ್ರಗಳೂ ಇವೆ. ಈ ಚಿತ್ರಗಳಲ್ಲಿ ಬೆಳವಣಿಗೆ ಏನಿದೆ ಅದು ತನಗೆ ತಾನೇ ಆಗುತ್ತಾ ಇದೆ.  ಇದೆಲ್ಲವೂ ನಿರ್ವಾತದಲ್ಲಿ ಖಂಡಿತಾ ಆಗಿದ್ದಲ್ಲ. ಬಾಲಕ ಒಂದು ಪರಿಸರ(ವಾತಾವರಣ)ದಲ್ಲಿದ್ದಾನೆ. ಅದರಲ್ಲಿ ಅವನು ಜನರೊಂದಿಗೆ ಕೆಲಸ ಮಾಡುತ್ತಾ ಇದ್ದಾನೆ.

ಯಾರ ಸಾಮರ್ಥ್ಯಗಳನ್ನು ಈಗ ತಾನೆ ನೋಡಿದೆವೋ  ಆ ಬಾಲಕನಿಗೆ ನಾವು ಬರೆಯುವುದನ್ನು ಹೇಗೆ ಕಲಿಸುವುದು?

**ಬರವಣಿಗೆಯನ್ನು ಕಲಿಸುವುದು**

ಬರೆಯಲು ಬೇಕಾದ ತಿಳಿವಳಿಕೆ, ಅದರಲ್ಲೂ ವಿಶೇಷವಾಗಿ ತರಗತಿಗಳಲ್ಲಿ  ಕಂಡುಬರುವ ತಿಳಿವಳಿಕೆ ಅದು– ಬರೆಯುವುದು ಎಂದರೆ ಅಕ್ಷರಗಳು ಮತ್ತು ಶಬ್ದಗಳನ್ನು ಬರೆಯುವುದು, ಸರಿಯಾಗಿ ಮತ್ತು ಸುಂದರವಾಗಿ ಬರೆಯುವುದು, ಬೋರ್ಡ್ ಇಲ್ಲವೆ ಪಠ್ಯ ಪುಸ್ತಕದಿಂದ ಕಾಪಿ ಮಾಡಿ ಬರೆಯುವುದು, ಹೇಗಿವೆಯೋ ಹಾಗೆ(=ತದ್ವತ್ತಾಗಿ) ಬರೆಯಲು

ಸಾಧ್ಯವಾದರೆ ಬಹಳ ಒಳ್ಳೆಯದು, ಒಂದು ವೇಳೆ ಪ್ರಾರಂಭದ ತರಗತಿಗಳಿಂದ ಸ್ವಲ್ಪ ಮುಂದೆ ಹೋಗಿದ್ದರೆ ಅಂದರೆ ಎರಡು ಅಥವಾ ಮೂರನೇ ತರಗತಿಯಾಗಿದ್ದರೆ, ಬರೆಯುವುದು ಅಂದರೆ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯುವುದು, ಬಿಟ್ಟಿರುವ ಭಾಗಗಳನ್ನು ಭರ್ತಿ ಮಾಡುವುದು, ಶಬ್ದಗಳ ಅರ್ಥ ಇಲ್ಲವೆ ಉಕ್ತ–ಲೇಖನ ಬರೆಯುವುದು ಇವೇ ಮೊದಲಾದವು. ಪಠ್ಯಪುಸ್ತಕಗಳ ಅಭ್ಯಾಸವೂ ಹೀಗೆಯೇ ಇರುತ್ತವೆ. ಈ ರೀತಿಯ ಬರವಣಿಗೆಯಲ್ಲಿ ಬರೆಯುವವನಿಗೆ/ಕಲಿಯುವವನಿಗೆ ವಿಶೇಷವಾದ ಬುದ್ಧಿಯ ಕಸರತ್ತು ಏನೊಂದನ್ನೂ ಮಾಡುವುದು ಇರುವುದಿಲ್ಲ ಎನ್ನುವುದಂತೂ ಸುಸ್ಪಷ್ಟವಿದೆ. ಅವನು ಅಕ್ಷರಗಳು ಮತ್ತು ಶಬ್ದಗಳನ್ನು ಓದುವುದು ಮತ್ತು ಮಾಡುವುದನ್ನು ಕಲಿಯುವುದು ಇಷ್ಟು ಮಾತ್ರ ಇರುತ್ತದೆ. ಅಲ್ಲದೆ ತನ್ನ ನೆನಪನ್ನು ದುಡಿಸಿಕೊಳ್ಳುವುದು ಇರುತ್ತದೆ. ಕಾರಣ, ಏನನ್ನು ಕೊಟ್ಟಿದೆಯೋ ಅದನ್ನು ಮಾತ್ರ ಬರೆಯುವುದು. ತನ್ನ ಅಭಿವ್ಯಕ್ತಿಯನ್ನು ಮರೆತುಬಿಡುವುದು.  ಶಾಲೆಗೆ ಬರುತ್ತಲೇ ಮಕ್ಕಳಿಗೆ ಅಕ್ಷರಗಳನ್ನು ಬರೆಯುವುದನ್ನು ಕಲಿಸುವ ಅಭ್ಯಾಸಗಳು ಶುರುವಾಗಿಬಿಡುತ್ತವೆ. ಹಿಂದೀ ಪ್ರದೇಶಗಳಲ್ಲಿ ಮಕ್ಕಳು ಹಿಂದಿ ಮತ್ತು ಇಂಗ್ಲಿಷ್ ವರ್ಣಮಾಲೆಯನ್ನು ಬರೆಯುವ ಅಭ್ಯಾಸವನ್ನು ಮಾಡುತ್ತಿರುತ್ತಾರೆ. ಅನೇಕ ತರಗತಿಗಳನ್ನು ಅವಲೋಕಿಸುವಾಗ(ಇನ್ ಸ್ಪೆಕ್ಷನ್ ಮಾಡುವಾಗ) ಒಂದು ಮತ್ತು ಎರಡನೇ ತರಗತಿಗಳಲ್ಲಿ ಮಕ್ಕಳು ವರ್ಣಮಾಲೆ, ಕಾಗುಣಿತ ಮತ್ತು ಶಬ್ದಗಳನ್ನು ಮತ್ತೆ ಮತ್ತೆ ಬರೆಯುವ ಕೆಲಸ ಮಾಡುತ್ತಿರುವುದನ್ನು ನೋಡಿದ್ದೇನೆ. ತೀರ ಇತ್ತೀಚೆಗೆ ಬೋರ್ಡಿಂಗ್ ಸ್ಕೂಲ್‌ನಲ್ಲಿ ಕಿಂಡರ್ ಗಾರ್ಟನ್‌ನಲ್ಲಿ ಇದ್ದ ಇನ್ನೊಬ್ಬ ಬಾಲಕನನ್ನು ನೋಡಿದ್ದೇನೆ. ಸರಿಸುಮಾರು ನಾಲ್ಕು ತಿಂಗಳುಗಳಿಂದ ಅವನು ಇಲ್ಲೇ ಇದ್ದಾನೆ. ಅವನ ವಯಸ್ಸು ಇನ್ನೂ ಐದು ವರ್ಷ ಮತ್ತು ಎರಡು ತಿಂಗಳು. ಶಾಲೆ ಬಂದಾಗಿದೆ. ಆದರೆ ಅವನು ಶಾಲೆಯಲ್ಲಿ ಇದ್ದಾನೆ ಎನ್ನುವ ಕಾರಣಕ್ಕೆ –ದಿನವೂ ಎರಡು ಪೇಜು ಹಿಂದೀ ವರ್ಣಗಳು, ಮತ್ತು ಎರಡು ಪೇಜು ಇಂಗ್ಲಿಷಿನ ವರ್ಣಗಳನ್ನು ಅಂದರೆ ದಿನಕ್ಕೆ ಒಟ್ಟು ನಾಲ್ಕು ಪುಟ ಬರೆಯುವ ಕೆಲಸ ಮಾಡುವುದು ಇರುತ್ತದೆ. ಪುಟದಲ್ಲಿ ಜಾಗ ಕೊಡಲಾಗಿದೆ. ಅಲ್ಲಿ ಅವನು ಅದನ್ನು ಬರೆಯಬೇಕು. ಅದೂ ಎಂಥದು ಎಂದರೆ ಉದಾಹರಣೆಯಾಗಿ ಏನನ್ನು ಕೊಟ್ಟಿದೆಯೋ ಅದನ್ನು, ಸಾಮಾನ್ಯವಾಗಿ ಪುಸ್ತಕಗಳಲ್ಲಿ ಇರುವುದನ್ನು. ಅವನ ಟೀಚರ್ ಅವನ ಹತ್ತಿರವೇ ಅದೂ ಕೈಯಲ್ಲಿ ರಬ್ಬರ್ ಇಟ್ಟುಕೊಂಡೇ ಕುಳಿತಿರುತ್ತಾರೆ(ಳೆ). ಅಕ್ಷರಗಳ ಆಕೃತಿಯನ್ನು ಬರೆಯುವುದರಲ್ಲಿ ಅವನು ಏನೊಂದು ಸಣ್ಣ ತಪ್ಪು ಮಾಡಿದರೂ ಆಕೆ ಅದನ್ನು ಅಳಿಸಿಬಿಟ್ಟು ಮತ್ತೆ ಅದನ್ನೇ ಬರೆಯಲು ಹೇಳುತ್ತಾಳೆ. ಒಂದು ಪುಟದಲ್ಲಿ ಒಂದು ಅಕ್ಷರವನ್ನು 23 ಬಾರಿ ಅವನು ಬರೆಯಬೇಕಾಗುತ್ತದೆ. ಮತ್ತು ಇಂಥವು ಎರಡು ಪುಟ ಹಿಂದಿಯದನ್ನು ಬರೆಯುವುದಿರುತ್ತದೆ. ಇದರರ್ಥ ಅವನು ಒಟ್ಟು 46 ಸಲ ಬರೆಯಬೇಕಾಗಿತ್ತು ಮತ್ತು ಸರಿಸುಮಾರು ಇಷ್ಟೇ ಸಲ ಇಂಗ್ಲಿಷಿನ ಅಕ್ಷರಗಳನ್ನು. ಇದರ ಮೇಲೆ ಆ ಹುಡುಗ ಸರಿಯಾಗಿ ಬರೆಯದೆ ಇದ್ದರೆ, ಅಕ್ಷರದ ಆಕಾರದಲ್ಲಿ ಸ್ವಲ್ಪ ಏನಾದರೂ ಹೆಚ್ಚುಕಡಿಮೆ ಆದರೆ ಅದನ್ನು ಟೀಚರ್ ಅಳಿಸಿಬಿಡುತ್ತಿದ್ದರು(ಳು). ಅಂದರೆ ಈ ರೀತಿ ಈ ನಾಲ್ಕು ಪುಟಗಳಲ್ಲಿ ಪ್ರತಿ ಅಕ್ಷರವನ್ನು ಬರೆಯಲು 100–120 ಬಾರಿ ಪ್ರಯತ್ನಗಳನ್ನು ಮಾಡಬೇಕಾಗುತ್ತಿತ್ತು.

ಸಾಮಾನ್ಯವಾಗಿ ಶಾಲೆಗಳಲ್ಲಿ ಹೀಗೇ ನಡೆಯುತ್ತದೆ. ಪ್ರಾರಂಭದ ತರಗತಿಗಳಲ್ಲಿ ಅಕ್ಷರಗಳ ಬರಹ ಮತ್ತು ಶಬ್ದಗಳ ಬರಹದ ಅಭ್ಯಾಸದ ಮೇಲೆ ಅಭ್ಯಾಸ. ಒಂದು ವೇಳೆ ಚಿತ್ರ ಬರೆಯುವುದಿದ್ದರೆ ಟೀಚರ್ ಬೋರ್ಡ್ ಮೇಲೆ ಏನು ಬರೆದಿದ್ದಾರೋ ಅದನ್ನು ಬರೆಯುವುದು, ಇಲ್ಲವೆ ಡ್ರಾಯಿಂಗ್ ಪುಸ್ತಕದಲ್ಲಿ ಕೊಟ್ಟಿರುವ  ಚಿತ್ರದಲ್ಲಿ ಬಣ್ಣ ತುಂಬಿಸುವುದು. ಅಂದರೆ ಅವರು ಏನು ಮಾಡಬಲ್ಲರೋ(ಅವರು ಏನು ಮಾಡಬಲ್ಲರೆಂಬುದನ್ನು ನಾವು ನೋಡಿದ್ದೇವೆ), ಅವರು ಏನನ್ನು ತಿಳಿದಿದ್ದಾರೋ ಅದನ್ನು ಒಂದು ಕಡೆ ಇಟ್ಟುಬಿಟ್ಟು ಹಿರಿಯರಿಗೆ ಏನು ಗೊತ್ತಿದೆಯೋ ಮತ್ತು ಅವರು ಏನನ್ನು ಬಯಸುತ್ತಾರೋ ಅದನ್ನು ಮಾಡಿಸುವುದು ಮತ್ತು  ಅವರು ತಿಳಿದುಕೊಂಡಿರುವುದನ್ನು ಮಕ್ಕಳು ತಿಳಿದುಕೊಳ್ಳಲಿ  ಮತ್ತು ತಾವು ತಿಳಿದುಕೊಂಡ ರೀತಿಯಲ್ಲೇ ಅವರೂ ತಿಳಿದುಕೊಳ್ಳಲಿ ಎಂದು.

ಮಕ್ಕಳು ಹಿರಿಯರ ಮಾತನ್ನು  ಒಪ್ಪಿಕೊಂಡು ಅವರು ಏನನ್ನು ಬರೆಸುತ್ತಾರೆ ಅದನ್ನು ಬರೆಯಲಾರಂಭಿಸುತ್ತಾರೆ. ಈ ಅಕ್ಷರ ಯಾವುದು, ಇದರಿಂದ ಶಬ್ದ ಹೇಗೆ ಅಯಿತು, ಈ ಶಬ್ದ ನಾವು ಹೇಳುವ ಆ ಅರ್ಥವನ್ನು ಹೇಗೆ ತಿಳಿಸುತ್ತದೆ, ಇಲ್ಲವೆ ಈ ಶಬ್ದ ವಾಸ್ತವವನ್ನು ಹೇಗೆ ತಿಳಿಸುತ್ತದೆ ಎಂದೆಲ್ಲ ಅವರು ಕೇಳುವುದಿಲ್ಲ. ಅವರು ಕೇಳುವುದಿಲ್ಲ ಯಾಕೆಂದರೆ ಚಿಹ್ನೆಗಳು ಬೇರೆ ಬೇರೆ ರೀತಿಯವು ಇರಲು ಸಾಧ್ಯ ಎಂದು ಅವರು ತಿಳಿದುಕೊಂಡಿರುತ್ತಾರೆ.  ಮತ್ತು ಈ ಹೊಸ ಚಿಹ್ನೆಗಳನ್ನೂ ಅವರು ತಿಳಿಯ ಬಯಸುತ್ತಾರೆ. ಆದರೆ ನಮಗೆ ಅವರ ಈ ಸಾಮರ್ಥ್ಯ ಕೂಡ ತಿಳಿದಿರುವುದಿಲ್ಲ. ನಾವು ನಮ್ಮ ಮಾನದಂಡದ (ಅಳತೆಗೋಲು) ಮೇರೆಗೆ ಅವರ ತಿಳಿವಳಿಕೆಯನ್ನು ಅಳೆಯತೊಡಗುತ್ತೇವೆ. ಬೇರೆ ಬೇರೆ ಚಿಹ್ನೆಗಳನ್ನು(ಸಂಕೇತಗಳನ್ನು) ತಿಳಿದುಕೊಂಡಿರುವ ಅವನು ತನ್ನನ್ನು ಅಭಿವ್ಯಕ್ತಿಸಿಕೊಳ್ಳಲು ಕಲಿತಿದ್ದಾನೆಂದರೆ ಇದನ್ನೂ ಕಲಿಯುತ್ತಾನೆ ಎಂಬ ರೀತಿ ಅಲ್ಲ ಇದು.

ನಮ್ಮ ಮಾನದಂಡಗಳ ಮೇರೆಗೆ ನೋಡುತ್ತೇವಾದ ಕಾರಣ ಅದರ ಜೊತೆ ಇನ್ನಷ್ಟು ಅಪೇಕ್ಷೆಗಳೂ ಸೇರಿಕೊಂಡುಬಿಡುತ್ತವೆ. ಅರೆ! ಸ್ವಲ್ಪ ಚೆನ್ನಾಗಿ ಬರೆಯಲು ಪ್ರಯತ್ನಿಸು, ಅರೇ! ಈ ಅಕ್ಷರ ನಿನಗೆ ಬರೆಯಕ್ಕೆ ಬರಲ್ಲ, ಇದನ್ನಂತೂ ಉಲ್ಟಾ ಬರೆದಿದ್ದೀ, ಇದನ್ನೆಲ್ಲಿ ಬರೆದುಬಿಟ್ಟೆ, ಇವಲ್ಲದೆ ಇನ್ನೂ ಎಲ್ಲ ಥರದ ಸೂಚನೆಗಳು ಅವನನ್ನು ನಿರುತ್ಸಾಹಿತನನ್ನಾಗಿಸುವಂಥವು ಮತ್ತು ಅವನ ಆತ್ಮವಿಶ್ವಾಸವನ್ನು ಅಲ್ಲಾಡಿಸುವಂಥ ಟೀಕೆಗಳು. ಅದೂ ಯಾರು ಇಂಥ ಜಟಿಲ ವಿಚಾರಗಳನ್ನು ಕಾಗದದ ಮೇಲೆ ಅಂಕಿಸುವ(ಗೀಚುವ) ಸಾಮರ್ಥ್ಯ ಹೊಂದಿದ್ದಾನೋ, ಯಾರು ಇಂಥ ಸೂಕ್ಷ್ಮ ಅವಲೋಕನಗಳನ್ನು ಮಾಡುವುದನ್ನು ತಿಳಿದಿದ್ದಾನೋ, ಯಾರಿಗೆ ಅಕ್ಷರಗಳನ್ನು ಬರೆಯಲು ಬಳಸಬಹುದಾದ ಸರಳ ರೇಖೆ, ವಕ್ರ ರೇಖೆ, ವೃತ್ತ, ಅರ್ಧ ವೃತ್ತ ಅಲ್ಲದೆ ಇನ್ನೂ ಬಹಳಷ್ಟು ಆಕಾರಗಳನ್ನು ರಚಿಸುವುದು ಶಾಲೆಗೆ ಬರುವುದಕ್ಕೆ ಮುಂಚೆಯೇ ತಿಳಿದಿದೆಯೋ ಅಂಥವನಿಗೆ.

ಹೀಗೆ ಮಾಡುವಾಗ, ಬರೆಯುವ ಸಂದರ್ಭದಲ್ಲಿ ಬಾಲಕನಿಗೆ ಏನು ಬರುತ್ತೆ ಅದು ವ್ಯರ್ಥ, ಅವನದ್ದಕ್ಕೇನೂ ಮಹತ್ವ ಇಲ್ಲ ಎನ್ನುವ ಭಾವವನ್ನು ದಿನವೂ ನಾವು ಅವನ ಮನಸ್ಸಿಗೆ ತಂದುಕೊಡುತ್ತಾ ಇದ್ದೀವಿ. ಎರಡನೆಯದು ಅಂದರೆ ಅವನು ತನ್ನಷ್ಟಕ್ಕೆ ತಾನು ಸ್ವತಂತ್ರವಾಗಿ ಬರೆಯುವುದು ಎಂದರೆ ಏನು ಎಂದು ತಿಳಿದಿದ್ದಾನೆ ಅದು ತಪ್ಪು, ಅದರರ್ಥ ಅವನು ಬರೆದು ವ್ಯಕ್ತಪಡಿಸಬಲ್ಲ, ಅವನು ತಾನು ನೋಡಿದ್ದನ್ನು ಬರೆಯಬಲ್ಲ, ತನ್ನ ಭಾವನೆಗಳನ್ನು ಬರೆಯಬಲ್ಲ ತನ್ನ ಕಲ್ಪನೆಗಳನ್ನು ಬರೆಯಬಲ್ಲ ಎಂಬುದೆಲ್ಲವನ್ನೂ ಅವನು ಮರೆತುಬಿಡಬೇಕು ಎಂದು. ಹೀಗೆ ಮಾಡುತ್ತ ಕ್ರಮೇಣ ಬಾಲಕನಿಗೆ(ಮಗುವಿಗೆ) ಅವನ ಸ್ವಂತ ಸಾಮರ್ಥ್ಯಗಳನ್ನು ಕಡಿಮೆ ಅಂದಾಜಿಸುವುದನ್ನು (ಕಡಿಮೆ ಬೆಲೆ ಕಟ್ಟುವುದು) ಕಲಿಸುತ್ತೇವೆ. ನಮಗೇನು ತಿಳಿದಿದೆ ಅದನ್ನು ಅವನು ತಿಳಿಯಬೇಕು, ನಾವೇನು ಇಷ್ಟಪಡುತ್ತೇವೋ ಅದನ್ನು ಬರೆಯಬೇಕು, ನಾವು ಹೇಗೆ ಬರೆಯಬೇಕೆಂದು ಅಪೇಕ್ಷಿಸುತ್ತೇವೋ ಹಾಗೆಯೇ ಅವನು ಬರೆಯಬೇಕು, ಬರೆಯುವುದು ಎಂದರೆ ಅಕ್ಷರಗಳನ್ನು ಬರೆಯುವುದು, ಶಬ್ದಗಳನ್ನು ಬರೆಯುವುದು, ವಾಕ್ಯಗಳನ್ನು ಮತ್ತು ಪ್ಯಾರಾಗಳನ್ನು ಬರೆಯುವುದು ಎಂದು ನಾವು ತಿಳಿದಿದ್ದೇವೆ. ಅದು ಇದೇ ಕ್ರಮದಲ್ಲಿಯೇ ಆಗಬೇಕು. ಕಾರಣ ಅಕ್ಷರ ಬರೆಯಲು ಬರದಿದ್ದರೆ ಶಬ್ದಗಳನ್ನು ಹೇಗೆ ಬರೆಯುತ್ತಾರೆ ಮತ್ತೆ ಮುಂದೆಯೂ ಹಾಗೆಯೇ.

**ಮಗುವಿನ (ಬಾಲಕನ) ಸಹಜ ಬರವಣಿಗೆಯನ್ನು ಬೆಳೆಸುವುದು**

ಮೇಲೆ ಕೊಟ್ಟಿರುವ ಉದಾಹರಣಗಳಿಂದ ಮಕ್ಕಳು ಶಾಲೆಗೆ ಬರುವುದಕ್ಕೆ ಮುಂಚೆ ಬರೆಯುವುದರ ಕುರಿತಂತೆ ಸಾಕಷ್ಟು ತಿಳಿವಳಿಕೆಯನ್ನು ಬೆಳೆಸಿಕೊಂಡಿರುತ್ತಾರೆ. ಹಾಗೂ ಬರೆಯುದನ್ನು ಕಲಿತುಕೊಳ್ಳುವ ಬಗ್ಗೆ ಕೆಲವೊಂದು ತಳಹದಿ ರೂಪದ ಸಾಮರ್ಥ್ಯಗಳನ್ನು ಗಳಿಸಿಕೊಂಡೇ ತರಗತಿಗೆ ಬರುತ್ತಾರೆ ಎಂಬುದು ಸ್ಪಷ್ಟ. ಅವುಗಳೆಂದರೆ, ಬರಹದ ಆಕೃತಿಗಳ ಕುರಿತಾದ ತಿಳಿವಳಿಕೆ, ಬರಹಕ್ಕೆ ಬೇಕಾದ ವಸ್ತುಗಳ ತಿಳಿವಳಿಕೆ, ಬರಹದ ಪತ್ರಿಕೆಗಳ ಬಗೆಗಿನ ತಿಳಿವಳಿಕೆ, ಏನನ್ನು ವ್ಯಕ್ತಪಡಿಸಬಹುದು ಮತ್ತು ಹೇಗೆ ವ್ಯಕ್ತಪಡಿಸಬಹುದು ಎಂಬುದರ ಕುರಿತಾದ ತಿಳಿವಳಿಕೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಬರೆಯಬೇಕೆಂಬ ಇಚ್ಛೆ ಇರಬೇಕೆಂಬ ತಿಳಿವಳಿಕೆ. ಅವರ ಈ ಸಾಮರ್ಥ್ಯಗಳನ್ನು ತಿಳಿದುಕೊಳ್ಳುವುದಿಲ್ಲವಷ್ಟೇ ಅಲ್ಲ, ಬದಲಿಗೆ ಅವನ್ನು ಪೂರ್ತಿಯಾಗಿ ಮಕ್ಕಳಿಂದ ಬೇರ್ಪಡಿಸಿಬಿಡಲಾಗುತ್ತದೆ.(ದೂರಮಾಡು) ಮತ್ತು ಇದೇ ಮುಂದುವರೆದು ಅವರ ಈ ಸಾಮರ್ಥ್ಯಗಳನ್ನು ಬಳಕೆ ಮಾಡಲು ತರಗತಿಯಲ್ಲಿ ಜಾಗವೂ ಇರುವುದಿಲ್ಲ.

ಒಂದು ವೇಳೆ ಮಕ್ಕಳ ಸಾಮರ್ಥ್ಯಗಳನ್ನು ನೋಡುತ್ತ ಅವರು ಬರವಣಿಗೆಯನ್ನು ಕಲಿಕೆಯುವುದರಲ್ಲಿ ನಾವು ಸಹಾಯ ಮಾಡಬೇಕೆಂದು ಇಚ್ಛಿಸುವುದಾದರೆ ನಾವು ಮಾಡಬೇಕಾದ ಮೊದಲ ಕೆಲಸ ಮಕ್ಕಳ ಆರಂಭಿಕ ಬರವಣಿಗೆಯ ಸಂದರ್ಭದಲ್ಲಿ ನಮ್ಮ ತಿಳಿವಳಿಕೆ ಏನಿದೆ ಅದನ್ನು ಗಾಢಗೊಳಿಸುವುದು. ಸಾಮಾನ್ಯವಾಗಿ ಹೇಳುವ ಮತ್ತು ಅಂಗೀಕರಿಸಿರುವ ಸಂಗತಿಯೆಂದರೆ ಮಗುವಿಗೆ (ಬಾಲಕನಿಗೆ) ಏನು ಬರುತ್ತದೆ, ಹೊಸ ಕಲಿಕೆಗೆ ಅದೇ ತಳಹದಿಯಾಗಲಿ ಎಂಬುದು. ಅವನ ಎದುರಿನಲ್ಲಿ ಅವನು ಹೋರಾಡಬೇಕಾಗಿ ಬರುವಂಥ ಕಲಿಕೆಯ ಸವಾಲುಗಳಿರಲಿ. ಬರವಣಿಗೆಯ ಸಂದರ್ಭದಲ್ಲೂ ಇತ್ತ ಗಮನ ಕೊಡುವ ಅಗತ್ಯವಿದೆ.

ಇದರ ಅಂತರಾರ್ಥ: ಮಗುವಿಗೆ(=ಬಾಲಕನಿಗೆ) ಅವನು ಏನನ್ನು ಇಷ್ಟಪಡುತ್ತಾನೋ ಅದನ್ನು ಬರೆಯಬಹುದಾದಂಥ ಸ್ವಾತಂತ್ರ್ಯವಿರಲಿ. ಬರೆಯುವ ಈ ಸ್ವಾತಂತ್ರ್ಯ ಮಗುವಿನ ಬರಹದ ಅಭಿವ್ಯಕ್ತಿಯನ್ನು ಸುದೃಢಗೊಳಿಸುವುದು ಮಾತ್ರವಲ್ಲ; ಅವನ ಮೌಖಿಕ ಅಭಿವ್ಯಕ್ತಿ ಮತ್ತು ಓದುವ ಕೌಶಲವನ್ನು ಕೂಡ ಸುದೃಢಗೊಳಿಸುವುದರಲ್ಲಿ ನೆರವಾಗುತ್ತದೆ. ಅವನು ಯಾವ ಆಕೃತಿಯನ್ನು ರಚಿಸುತ್ತಾನೋ ಅದರ ಬಗ್ಗೆ ಅವನು ಮಾತಾಡಬಲ್ಲ ಮತ್ತು ಅದನ್ನು ಓದಲೂ ಬಲ್ಲ. ಪ್ರಾರಂಭದಲ್ಲಿ ಈ ಅಭಿವ್ಯಕ್ತಿ ಚಿತ್ರದ ರೂಪದಲ್ಲಿಯೇ ಇರುತ್ತದೆ, ಚಿತ್ರಗಳಲ್ಲಿ ಅಗುತ್ತಿರುವ ಬೆಳವಣಿಗೆಯನ್ನು ನೋಡುತ್ತಿದ್ದರೆ ಅಭಿವ್ಯಕ್ತಿಯಲ್ಲಿ

ವಿವರಗಳು ಹೆಚ್ಚಾಗುತ್ತಿರುವುದು ತುಂಬ ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಇದು ಈಗಾಗಲೇ ರಚಿತವಾಗಿರುವ ಚಿತ್ರಗಳ ನಕಲು ತೆಗೆಯುವುದು, ಮತ್ತು ರಚಿತವಾಗಿರುವ ಚಿತ್ರಗಳಿಗೆ ಬಣ್ಣ ತುಂಬುವುದಕ್ಕಿಂತ ನಿಶ್ಚಿತವಾಗಿಯೂ ಭಿನ್ನವಾದದ್ದು ಎಂದು ಘಂಟಾಘೋಷವಾಗಿ ಹೇಳುತ್ತೇನೆ.

ಮಕ್ಕಳು ಚಿತ್ರವನ್ನೇ ಬರೆಯ ಬೇಕು ಎಂದು ಹೇಳಲೂ ಸಾಧ್ಯವಿಲ್ಲ. ಅವರಿಗೆ ಎಂದೂ ಬೇರೆ ಅಕ್ಷರಗಳು, ಮತ್ತು ಶಬ್ದ ಗಳು ಅಥವಾ ವಾಕ್ಯಗಳನ್ನು ಕಲಿಸುವುದಿಲ್ಲ ಎಂದಲ್ಲ. ಆದರೆ ಇದರರ್ಥ ಅವನು ಯಾವಾಗ ಇದನ್ನೆಲ್ಲ ಕಲಿಯಲು ಸಿದ್ಧನಾಗುತ್ತಾನೋ ಅಗ ಇದೆಲ್ಲವನ್ನೂ ಕಲಿಸುವುದು ಎಂದು. ಮಕ್ಕಳಿಗೆ ಬರೆಯುವ ಸ್ವಾತಂತ್ರ್ಯವನ್ನು ನೀಡಿದಾಗ ಇದಕ್ಕೆ ಸಿದ್ಧಗೊಳಿಸುವಲ್ಲಿ ಬಹಳಷ್ಟು ನೆರವು ದೊರೆಯುತ್ತದೆ. ಮಕ್ಕಳು ಕುಳಿತುಕೊಂಡು  ಕಾಗದದ ಮೇಲೆ, ಸ್ಲೇಟಿನ ಮೇಲೆ, ಬೋರ್ಡಿನ ಮೇಲೆ, ಮಣ್ಣಿನಲ್ಲಿ, ಎಲ್ಲಿಯಾದರೂ ಸರಿ ಚಿತ್ರ ರಚಿಸುವಾಗ ಅವರಲ್ಲಿ –ನಾನೇನು ಬರೆದಿದ್ದೀನಿ ಹೇಳು? ಅರೇ ಇದನ್ನು ಬರೆದೆಯಾ, ಇಲ್ಲ. ಇದಂತೂ ಚೆನ್ನಾಗಿಲ್ಲ.. ಹಾಗಾದರೆ ಇದು ಆಗುತ್ತಾ ಹೂಂ..... ಇದರಲ್ಲಿ ಯಾರು ಯಾರು ಇದ್ದಾರೆ? ಇದಂತೂ ಒಂಟೆ, ಒಂಟೆ ಹೀಗಿರುತ್ತೆ, ಹೌದು, ನೀನು ಮಾಡಿರೋದು ಆಮೆ. ನಡಿ ತಿರುಗಾ ಮಾಡೋಣ– ಇವೇ ಮೊದಲಾದ  ಮಾತು–ಕತೆಗಳೂ ನಡೆಯುತ್ತಿರುತ್ತವೆ.

ಈ ಮಾತು–ಕತೆ, ಬರೆದೂ ವಿಚಾರಗಳನ್ನು ಹಂಚಿಕೊಳ್ಳಬಹುದು ಎಂದು ಮಕ್ಕಳಿಗೆ ದೃಢಪಡಿಸಿಕೊಡುವಲ್ಲಿ ನೆರವಾಗುತ್ತದೆ. ನಾನು ಯಾಕೆ ಬರೆಯಬೇಕು, ಯಾರಿಗಾಗಿ ಬರೆಯಬೇಕು, ಮತ್ತು ಬರೆಯ ಬಲ್ಲೆನೆ ಎಂಬುದರ ಅನುಭವವನ್ನು ಸ್ವತಃ ಕಂಡುಕೊಳ್ಳುತ್ತಾರೆ. ಮಕ್ಕಳು ಚಿತ್ರ ರಚಿಸುತ್ತ ರಚಿಸುತ್ತ ನಾವು ರಚಿಸುತ್ತಾ ಇರುವ ಈ ಚಿತ್ರಗಳು ಏನಿವೆ ಅವುಗಳ ಮೂಲಕ ಬೇರೆಯವರೊಂದಿಗೆ ನಮ್ಮ ಆಲೋಚನೆಯನ್ನು ಹಂಚಿಕೊಳ್ಳಬಹುದು, ತಾವು ಏನು ಮಾಡಬಲ್ಲೆವು ಎಂಬುದನ್ನು ತಿಳಿಸಬಲ್ಲುವು, ಇದರೊಂದಿಗೆ ನಾವು ಆಟ ಆಡಲೂ ಬಹುದು, ನಮ್ಮ ಗೆಳೆಯರೊಂದಿಗೆ ಶಾಂತಿಯನ್ನೂ ಮಾಡಿಸಬಹುದು, ನಿನ್ನೆ ಅವರು ಏನನ್ನು ನೋಡಿದರು, ಅದು ಹೇಗಿತ್ತು ಎಂದು ಅವರಿಗೆ ಹೇಳಬಹುದು, ಅವನನ್ನು ಹೆದರಿಸಬಹುದು, ಖುಶಿ ಪಡಿಸಬಹುದು ಎಂಬುದನ್ನೆಲ್ಲ ತಿಳಿದುಕೊಳ್ಳುತ್ತಾರೆ.  ಜೊತೆಗೇ ಅವರು ಬರೆದದ್ದರ ಬಗ್ಗೆ ಬೇರೆಯವರು ಯಾವ ರೀತಿ ಅರ್ಥಮಾಡಿಕೊಂಡಿದ್ದಾರೆ  ಎಂಬುದನ್ನು ತಿಳಿದುಕೊಳ್ಳುವ ಅಗತ್ಯವೂ ಅವರಿಗೆ ಇದೆ ಮತ್ತು ಅವರು ಈ ತಿಳಿವಳಿಕೆನ್ನು ಹೀಗೆ ಬೆಳೆಸುತ್ತಾರೆ.

ಮಕ್ಕಳು ಚಿತ್ರಗಳನ್ನು ಬಿಡಿಸುತ್ತಿರುವಾಗ, ಬೇರೆಯವರಿಂದ ಈಗಾಗಲೇ ಅವರು  ಕೇಳಿರುವ ಕಥೆಗಳು ಮತ್ತು ಕವಿತೆಗಳ ಮೇಲೆ ಚಿತ್ರ ರಚಿಸಲು ಹೇಳಬಹುದು. ನೋಡಿಕೊಂಡು ನೋಡಿಕೊಂಡು ಶಬ್ದಗಳನ್ನು ಬರೆಯಲಾರಂಭಿಸಬಹುದು. ಕಾರಣ, ಆ ಚಿತ್ರಗಳಿಗೆ ಹೆಸರು(ಶೀರ್ಷಿಕೆ) ಕೊಡಬೇಕೆಂಬ ಒಂದು ಸಹಜ ಇಚ್ಛೆ ಇರುತ್ತದೆ. ಒಂದೊಂದು ಸಲ ಅವರೇ ಏನಾದರೂ ಬರೆದು ಇದು ಚಿತ್ರ, ಇದರ ಹೆಸರು ಇಂಥದು ಎಂದು ( ಆ ಹೆಸರು ನಾವು ಇಷ್ಟಪಡುವ ಲಿಪಿಯಲ್ಲಿ ಇಲ್ಲದೆ ಇದ್ದಾಗ್ಯೂ) ಹೇಳುತ್ತಾರೆ. ಹಿರಿಯರ ಪಾತ್ರ ಏನಿದ್ದರೂ ಮಕ್ಕಳು ಬರೆದ ಚಿತ್ರಗಳನ್ನು ಮುಂದೆ ಕೊಂಡೊಯ್ಯಲು ಅವರಿಗೆ ನೆರವಾಗುವುದಾಗಬೇಕು. ಈ ನೆರವು ಅವರ ಚಿತ್ರಗಳನ್ನು ನೋಡುವುದು ಮತ್ತು ಪ್ರಶಂಸಿಸುವುದು, ಆ ಚಿತ್ರ ಕುರಿತ ಅವರ ವಿಚಾರವನ್ನು ಕೇಳಿಸಿಕೊಳ್ಳುವುದು, ಅವನು ಮಾಡಿರುವ ಚಿತ್ರಕ್ಕೆ ಪೂರಕವಾಗಿ ಚಿತ್ರ ಬರೆಯುವುದು, ಚಿತ್ರದ ಬಗ್ಗೆ ತಮ್ಮ ಅಭಿಪ್ರಾಯ ಇಟ್ಟುಕೊಳ್ಳುವುದು, ಅಥವಾ ಚಿತ್ರದ ಹೆಸರು ಬರೆಯುವುದು ಇವೇ ಮೊದಲಾದ ಯಾವುದೇ ಥರದ್ದಾಗಬಹುದು. ಈ ಮಾತು–ಕತೆ ಆ ಅಭಿವ್ಯಕ್ತಿಯನ್ನು ಮುಂದುವರಿಸುವಲ್ಲಿ ಬಹಳಷ್ಟು ಸಹಾಯಕವಾಗುತ್ತದೆ.

ಎಲ್ಲಕ್ಕಿಂತ ಮಹತ್ವದ್ದೆಂದರೆ ಬರೆಯುವುದನ್ನು ಗುರುತಿಸುವುದು ಮತ್ತು ದಿನವೂ ಏನಾದರೂ ಸ್ವಲ್ಪ ಬರೆಯುವುದು. ಮಕ್ಕಳು ಬರೆದದ್ದರ ಬಗ್ಗೆ ಅವರು ಏನೇನನ್ನು ಬರೆಯಬಹುದು ಎಂಬುದನ್ನು ಕುರಿತು ಯೋಚಿಸಲು ನೆರವಾಗುವಂಥ ಟೀಕೆ, ಟಿಪ್ಪಣಿಗಳು ಹಿರಿಯರಿಂದ ದೊರೆಯಬೇಕು.  ಅವರು ಹೇಗೆ ಬರೆಯಬೇಕು ಎಂದು ಹೇಳುವುದರಿಂದ ನಾವು ಅವರಿಗೆ ಯಾವ ವಿಶೇಷವಾದ ನೆರವನ್ನೂ ನೀಡಿದಂತಾಗುವುದಿಲ್ಲ. ಮಕ್ಕಳು ಬರೆಯಲಾರಂಭಿಸಿದಾಗ ಒಮ್ಮೆಗೇ ಅವರ ಬರವಣಿಗೆ ಸುಂದರವಾಗಿರಬೇಕು, ಒಟ್ಟಿಗೆ ಕೂಡಿಸಿ ಬರಿ, ಅಕ್ಷರಗಳ ಆಕಾರವನ್ನು ಸರಿಮಾಡು, ಲೈನಿನ ಮೇಲೆ ಬರೆಯಬೇಡ, ಕೆಳಗಡೆ ಬರೆಯಬೇಡ ಹೀಗೆ ಎಲ್ಲ ಥರದ ಸೂಚನೆಗಳನ್ನು ಕೊಡುತ್ತೇವೆ. ಅಕ್ಷರಗಳನ್ನು ಬರಯುವುದು ಹೇಗೆ–ಉದಾಹರಣೆಗೆ, ಆ ಬರೆಯಲು ಮೊದಲು ಅರ್ಧ ವೃತ್ತ ಬರಿ, ಅದರ ಕೆಳಗಡೆ ಇನ್ನೊಂದು ಅರ್ಧವೃತ್ತ, ಈಗ ಮಧ್ಯದಲ್ಲಿ ಸರ್ಣಣದೊಂದು ಲೈನ್ ಹಾಕು ಮತ್ತೆ ಇನ್ನೊಂದು ನೇರವಾಗಿ ನಿಂತಿರೋ ಲೈನ್, ಹಾಗೂ ಒಂದು ಅಕ್ಷರಕ್ಕೆ  ನೀಡುವ ಈ ಸೂಚನೆಗಳು ಪ್ರತಿ ಬಾರಿಯೂ ಬದಲಾಗುತ್ತವೆ. ಇದು ಬರವಣಿಗೆಯನ್ನು ಸರಳ ಮಾಡುವುದೋ ಇಲ್ಲವೆ ಕಠಿಣ ಮಾಡುವುದೋ ಅಂತ ಅರ್ಥ ಆಗ್ತಾ ಇಲ್ಲ. ಆದರೆ– ಅಕ್ಷರಗಳ ಅಳತೆ ಆಗಬಹುದು, ಆಕಾರಗಳಾಗಬಹುದು, ಎರಡು ಅಕ್ಷರಗಳ ನಡುವಿನ ಜಾಗ

ಆಗಬಹುದು, ಲೈನಿನ ಮೇಲೆ/ಲೈನಿನ ಕೆಳಗೆ ಬರೆಯುವುದಾಗಬಹುದು, ಶಬ್ದಗಳ ನಡುವಿನ ಸ್ಥಳ ಆಗಬಹುದು ಇದೆಲ್ಲವೂ ಬಾಲಕ ಬರೆಯುತ್ತಾ ಬರೆಯುತ್ತಾ ತನಗೆ ತಾನೇ ಸರಿಹೋಗುತ್ತದೆ. ಜೊತೆಗೆ ಬರೆಯುವುದು ಮತ್ತು ಓದುವುದು ಎರಡನ್ನೂ ಜೊತೆ ಜೊತೆಯಲ್ಲೇ ನೋಡಬೇಕಾದ್ದು ಅಗತ್ಯ. ಓದುತ್ತ ಓದುತ್ತ ಬರವಣಿಗೆಯಲ್ಲೂ ಬೆಳವಣಿಗೆ ಆಗುತ್ತಾ ಹೋಗುತ್ತದೆ. ಓದಿ ಅರ್ಥಮಾಡಿಕೊಂಡಿರುವ ಶಬ್ದಗಳನ್ನು ಮಕ್ಕಳು ಸಾಕಷ್ಟು ಆತ್ಮ ವಿಶ್ವಾಸದಿಂದ ಬರೆಯುತ್ತಾರೆ.

**ಸಂಕ್ಷೇಪದಲ್ಲಿ**

ಮಕ್ಕಳು ಶಾಲೆಗೆ ಬರುವ ಹೊತ್ತಿಗೆ ಅವರಲ್ಲಿ ಬರವಣಿಗೆಗೆ ಅಗತ್ಯವಿರುವ ತಳಹದಿ ರೂಪದ ತಿಳಿವಳಿಕೆ ಬೆಳವಣಿಗೆಯಾಗಿಬಿಟ್ಟಿರುತ್ತದೆ. ಅಲ್ಲದೆ ಅಗತ್ಯವಿರುವಷ್ಟು ಚಲನಶಿಲ ಕೌಶಲ ಕೂಡ ಒಂದು ಮಟ್ಟದವರೆಗೆ ವಿಕಸಿತವಾಗಿರುತ್ತದೆ. ಆದರೆ ನಾವು ಇದನ್ನೆಲ್ಲ ತಿಳಿದುಕೊಳ್ಳದೆ ಜಗತ್ತನ್ನು ನಮ್ಮ ದೃಷ್ಟಿಕೋನದಿಂದಲೇ ನೋಡುತ್ತ ಈ ಮಗುವಿನ(ಬಾಲಕನ) ಜೊತೆ ಕೆಲಸ ಮಾಡುತ್ತೇವೆ. ತನ್ನದೇ ಆದ ಬುದ್ಧಿ, ಮತ್ತು ಅನುಭವಗಳನ್ನು ಹೊಂದಿದ್ದು ಈ ಜಗತ್ತನ್ನು ನಿರಂತರವಾಗಿ ತಿಳಿದುಕೊಳ್ಳಲು ಯತ್ನಿಸುತ್ತಿರುವ ಆ ಮಗುವಿಗೆ ಈ ಜಗತ್ತು ಹೇಗೆ ಕಾಣುತ್ತಿರಬಹುದು ಎಂಬುದನ್ನು ಕುರಿತು ನಾವು ಯೋಚಿಸುವ ಅಗತ್ಯವಿದೆ. ಅವನ ಈ ಬುದ್ಧಿಯನ್ನು, ಅವನ ಅನುಭವಗಳನ್ನು ಮತ್ತು ಸಾಮರ್ಥ್ಯಗಳನ್ನು ತಿಳಿದುಕೊಳ್ಳುತ್ತ ಅವನೊಂದಿಗೆ ಕೆಲಸ ಮಾಡುವ ಪ್ರಯತ್ನ ನಮ್ಮದಾಗಬೇಕು

Vygotsky L.S.(1978). The pre-history of written Language. In E. Souberman, M. Cole, S. scribner and V. john-steiner(Eds) . Mind in society: The Development of higher psychological processes(pp. 105-119) Cambridge. MA. Harvard University press



ತಮ್ಮ ಈ ಪತ್ರಿಕೆಯಲ್ಲಿ ಅವರು ಮಕ್ಕಳಲ್ಲಿ ಸಂಕೇತಗಳನ್ನು ಕುರಿತಾದ ತಳಿವಳಿಕೆ ಹೇಗೆ ಸಹಜ ರೂಪದಲ್ಲಿ ಬೆಳವಣಿಗೆಯಾಗುತ್ತದೆ ಎಂಬ ಸಂಗತಿಯನ್ನೂ ವಿಸ್ತಾರವಾಗಿ ವಿವರಿಸಿದ್ದಾರೆ. ಮಕ್ಕಳ ಆಟಗಳು, ಅವರು ಚಿತ್ರಗಳನ್ನು ರಚಿಸುವುದು ಈ ಸಂಕೇತಗಳ ಬಗೆಗಿನ ತಿಳಿವನ್ನು ಇನ್ನಷ್ಟು ಉತ್ತಮಪಡಿಸುವಲ್ಲಿ ಮತ್ತು ಬರವಣಿಗೆಯನ್ನು ಹೀಗೆ ವಿಕಸಿತಗೊಳಿಸುವಲ್ಲಿ ಬಹಳಷ್ಟು ಸಹಾಯಕಗಳಾಗುತ್ತವೆ.